ತಲೆಯಿಲ್ಲದವರಿಗೆ—

# ಜೀವನ ಪ್ರವಾಹ

ರಮಾಕಾಂತ

# ಮನೋವೇದಿಕೆ



ಕೆಲವರು ಮನೋರಂಜನಕ್ಕಾಗಿ, ಮತ್ತೊಬ್ಬರು ಮನದಲ್ಲಿಯ ಮಂಜು ಮುಸುಕಿದ ನಗೆಯನ್ನು ಹೊರಸೂಸಲು ಪ್ರಚೋದಿಸುವದಕ್ಕಾಗಿ, ಮಗದೊಬ್ಬರು ಭಾವನೆಗಳನ್ನು ರೂಪರೇಷೆಗಳಿಂದ ರಂಜಿತವಾಗಿ ಮಂಡಿಸುವದಕ್ಕಾಗಿ, ಕತೆಗಳನ್ನು ಹೇಳುವದುಂಟು, ಆರುಹುವದುಂಟು. ಹಾಗೂ ಬರೆಯುವದುಂಟು. ಈ ಸಂಕಲನಗಳಲ್ಲಿಯ ಕತೆಗಳು ಕಟ್ಟು ಕತೆಗಳಲ್ಲ; ಜೀವನಪ್ರವಾಹದಲ್ಲಿ ತೇಲುತ್ತ, ನೀರನ್ನು ಗುಟುಗುಟನೆ ಕುಡಿದು ಮುಣುಮುಣುಗಿ ಏಳುತ್ತ ಕೂಗುತ್ತ ಹರಿದುಕೊಂಡು ಹೋಗುವ ಜೀವಿಗಳ ಚಿತ್ರಗಳು. ಈ ಜೀವಿಗಳನ್ನು ಪ್ರವಾಹದಲ್ಲಿ ತೇಲಿಬಿಟ್ಟದ್ದು ನನ್ನ ಬುದ್ಧಿಯಲ್ಲ; ನನ್ನ ಮನೋಭಾವನೆಯ ಶಕ್ತಿಯಲ್ಲ. ಆದರೆ ಪರ್ಶಿಯಾದೇಶದ ಮಹಾಕವಿಯಾದ ಹಾಫೀಜನು ಅನ್ನುವಂತೆ, ಜೀವನಪ್ರವಾಹದಲ್ಲಿ ತೇಲುತ್ತಿರುವ ಜೀವಿಗಳನ್ನು ಕಂಡು, ಹೃದಯದಲ್ಲಿ ಹುದುಗಿಕೊಂಡಿದ್ದ ಸೋವಾರಿ ಆನಂದವು ಎಚ್ಚೆತ್ತು, ಚಟುವಟಿಕೆಯಿಂದ ಚಿತ್ರಿಸಿದ ಚಿತ್ರಗಳು. ಹಾಫೀಜನು ಹೇಳಿದಂತೆ 'My idle happiness that slept so long is now at length awaking' ಎಂಬುದು ನನ್ನ ಸ್ಥಿತಿ. ಈ ಕತೆಗಳ ತಿರುಳು ದೇವತೆಗಳ ಮಿಷ್ಟಾನ್ನಭೋಜನವಲ್ಲ (food not of angels-Milton). ಮಾನವರ ಮನದುಂಬಿದ ಊಟವಲ್ಲ, ಭೂತಗಳ ಭೂರಿ ಕೂಳಲ್ಲ. ಆದರೆ ಸಹನಶೀಲತೆಯ ಶಕ್ತಿಯನ್ನು ಬೆಳೆಯಿಸುವ ಜೀವಿಗಳ ಕೈತುತ್ತು.

ಹುಟ್ಟು-ಸಾವು-ನೋವುಗಳಲ್ಲಿ ಜೀವನವಿರುವುದು, ಆದರೆ ಪ್ರವಾಹವಿರುವದಿಲ್ಲ. ಪಶುಗಳಲ್ಲಿಯೂ ಕೂಡ ಹುಟ್ಟು-ಸಾವು-ನೋವುಗಳಿರುವವು. ಅವುಗಳ ಜೀವನಕ್ಕೆ ಪ್ರವಾಹ ಉಂಟೇ ಎಂದು ಕೇಳಬಹುದು. ಮಾನವನ ಅಸ್ತಿತ್ವದಲ್ಲಿಯೇ ಇಲ್ಲವೆ ಅಸ್ತಿತ್ವ (Existentialism) ದಲ್ಲಿಯೇ ಜೀವನ ಪ್ರವಾಹವಿಲ್ಲೆಂದು ಅಲ್ಲಗಳೆದ ಮೇಲೆ ಪಶುಗಳಲ್ಲಿ ಉಂಟೇ ಎಂದು ಕೇಳುವದು

ಡಿಕ್ಕಿಹಾಯಬೇಕೆಂಬ ಮನುಷ್ಯನು ತಾನು ಹಾಯುತಕ್ಕ ಗೋಡೆಗೆ ಪ್ರಶ್ನೆ ಹಾಕಿದಂತಾಗುವದು! ಮಾನವನ ಮಾನವತ್ವವಾದವೇ (Humanism) ಜೀವನದ ಝುರಿಯಿರುವದು. ಈ ಝುರಿಯೇ ಜುಳುಜುಳನೆ ಹರಿದು ಅಗಮ್ಯ ರೂಪವನ್ನು ತಾಳಿ ಪ್ರತ್ಯಕ್ಷ ಪ್ರವಾಹವಾಗುವದು. ಡಾರವಿನ್ನನ ವಿಕಾಸವಾದದಿಂದ ನೆಲೆ ತಿಳಿಯದ ಪ್ರವಾಹವಾಗಲಾರದು. ಆತನ ವಿಕಾಸತತ್ವವು ಮಾನವನ ಬುದ್ಧಿಗೆ ಅನ್ವಯಿಸುವದಿಲ್ಲ. ಮಾನವನ ಅಂಗೋಪಾಂಗಗಳಲ್ಲಿ ಪರಿವರ್ತನೆ ಹಾಗೂ ವಿಕಾಸವು ನೈಸರ್ಗಿಕ ನಿಯಮದಿಂದಾಗಲಿ ಇಲ್ಲವೆ ಪರಿಸ್ಥಿತಿಗಳಲ್ಲಿಯ ಬದಲಾವಣೆಯಿಂದಾಗಲಿ ಆಗಬಹುದು. ಮಾನವನ ದೇಹದ ಬಾಹ್ಯ ಪರಿವರ್ತನೆ ಹಾಗೂ ವಿಕಾಸವು ಜೀವನದ ಪ್ರವಾಹದ ಝುರಿಯಾಗಲಾರದು.

ಆದಿ-ಅನಾದಿಯಲ್ಲಿ ಪಶುತ್ವಸ್ಥಿತಿಯಲ್ಲಿದ್ದ ಮಾನವನ ಪ್ರಾಕೃತ ಗುಣಗಳಿಗೂ ಇಪ್ಪತ್ತನೇ ಶತಮಾನದಲ್ಲಿ ಇಲ್ಲವೆ ಅರವತ್ತನೇ ಶತಮಾನದಲ್ಲಿಯ ಮಾನವನ ಪ್ರಾಕೃತ ಗುಣಗಳಿಗೂ ಏನೂ ವ್ಯತ್ಯಾಸ ಕಂಡುಬರುವದಿಲ್ಲ. ಪ್ರಾಚೀನಕಾಲದಲ್ಲಿದ್ದ ಮಾನವನ ಬುದ್ಧಿ ಹಾಗೂ ನಮ್ಮ ಬುದ್ಧಿ ಒಂದೇ. ಆದರೆ ಬುದ್ಧಿವಂತಿಕೆಯಲ್ಲಿ ಮಹದಂತರ ಉಂಟು. ಮಾನವನ ಪ್ರಾಕೃತ ಗುಣಗಳಲ್ಲಿ ವಿಕಾಸವಿಲ್ಲ. ರಾಗ, ದ್ವೇಷ, ಮದ, ಮತ್ಸರ, ಆನಂದ, ಸಂತಾಪ– ಈ ಪ್ರಾಕೃತಗುಣಗಳಲ್ಲಿ ವಿಕಾಸವಿಲ್ಲ. ಇವುಗಳನ್ನು ಹೊರಪಡಿಸಿ ವ್ಯಕ್ತ ಮಾಡುವ ನ್ಯಾಸದಲ್ಲಿ ಭೇದವಿರುವದು. ಪಶುತ್ವ ಸ್ಥಿತಿಯಲ್ಲಿದ್ದ ಮಾನವನ ನ್ಯಾಸವೇ ಬೇರೆ, ಆವಿರ್ಭಾವ ಮಾಡುವ ನಮ್ಮ ವಿನ್ಯಾಸವೇ ಬೇರೆ; ಇದಕ್ಕೂ ಒಂದು ಹೆಜ್ಜೆ ಮುಂದಿಟ್ಟು ನೋಡಿದರೆ ಅರವತ್ತನೇ ಶತಮಾನದಲ್ಲಿಯ ಮಾನವನು ತನ್ನ ಪ್ರಾಕೃತಗುಣಗಳನ್ನು ಹೊರಪಡಿಸುವ ರೀತಿಯೇ ಬೇರೆಯಾಗುವದು. ಒಂದು ಶತಮಾನದಲ್ಲಿದ್ದ ರೀತಿ ಮತ್ತೊಂದು ಶತಮಾನದಲ್ಲಿ ಪ್ರತಿಹತವಾಗುವದು. ಒಂದು ರೀತಿಯಲ್ಲಿ ಹುದುಗಿಕೊಂಡ ಮತ್ತೊಂದು ರೀತಿಯನ್ನು ಬುದ್ಧಿವಂತಿಕೆಯು (Intelligence) ಜಗ್ಗಿ ಕಾಲಮಾನ ಪರಿಸ್ಥಿತಿಗೆ ಅನುಕೂಲವಾಗುವಂತೆ ಸರಿಪಡಿಸಿಕೊಳ್ಳುವದು. ಕಾಲವು ನಮಗೆ ತಿಳಿಯದ ಕಾಳಾಗಿ ನಿಂತರೂ ಬುದ್ಧಿವಂತಿಕೆಯಲ್ಲಿ ವಿಕಾಸವನ್ನು ಮಾಡುತ್ತ ಹೋಗುವನು. ವಿಕಾಸವೆಂದು ಅನ್ನುವದಕ್ಕಿಂತ ಹೆಚ್ಚಳವೆಂದರೆ ಒಳಿತು.

ಆರ್ಭಟದಿಂದಲೂ ಇನ್ನೊಂದೆಡೆಗೆ ಗುಪ್ತಗಾಮಿಯಾಗಿಯೂ ಹರಿಯುವದು ಉಂಟು. ಈ ಪ್ರವಾಹದ ಹರಿಯುವ ರೀತಿಯು ನಮ್ಮಲ್ಲಿಯ ಆಂತರಿಕ ಹಾಗೂ ಬಾಹ್ಯ ಪ್ರಗತಿಯ ದ್ಯೋತಕ. ಬಾಹ್ಯ ಹಾಗೂ ಆಂತರಿಕ ಪ್ರಗತಿಯಲ್ಲಿ ಹೇಳಿಕೊಳ್ಳುವಷ್ಟು ನಿಕಟಸಂಬಂಧವಿಲ್ಲ. ಆಂತರಿಕ ಜೀವನ ಬೆಳೆದಂತೆ ಬಾಹ್ಯಜೀವನ ಬೆಳೆಯುವದು. ಇದು ಸಿದ್ಧಾಂತದ ಮಾತು. ಬಾಹ್ಯ ಬೆಳವಣಿಗೆಯಿಂದ ಆಂತರಿಕ ಪ್ರಗತಿ ಇಲ್ಲವೆ ಬೆಳವಣಿಗೆ ಸಕಲ ಕಾಲ ದಲ್ಲಿಯೂ, ಸದಾಸರ್ವದಾ ಆಗುವದೆಂದು ಶಾಶ್ವತ ನಿಯಮಾನುಸಾರವಾಗಿ ಹೇಳಲಿಕ್ಕೆ ಆಗುವದಿಲ್ಲ. ಆಂತರಿಕ ಜೀವನವು ಬಾಹ್ಯಜೀವನವನ್ನು ಮಾರ್ಪಡಿಸುವದು

ಪ್ರತಿಯೊಬ್ಬನ ಸ್ವಭಾವದಿಂದ ಆತನ ಮಾನವತ್ವ ಕಂಡುಹಿಡಿಯ ಬಹುದು. ಮಾನವತ್ವವನ್ನು ತೋರಿಸುವದು ಮನುಷ್ಯನ ಸ್ವಭಾವ. ಇದು ಆತನ ಮಾಪು. ಸಕಲರನ್ನು ತನ್ನಂತೆ ಬಗೆದೊಡೆ ಕೈಲಾಸ ಎಂಬೀ ಮಾತು ಮಾನವತ್ವದ ಒಂದು ತುಂಡಿನ ತುಣುಕು. ಈ ಮಾನವತ್ವಕ್ಕೆ ಸಹಸ್ರ ಮುಖಗಳು, ಸಹಸ್ರ ನಾಲಿಗೆಗಳು, ಸಹಸ್ರ ತಲೆಗಳಿರುವವು. ಮಾನವನು ತನ್ನ 'ಸ್ವ-ಭಾವ'ವನ್ನು ಮಾರ್ಪಡಿಸಿಕೊಳ್ಳತಕ್ಕದ್ದು ಬುದ್ಧಿ ಹಾಗೂ ಜ್ಞಾನದಿಂದ.

ನಡತೆ ಹಾಗೂ ಸ್ವಭಾವದಲ್ಲಿ ಮಹದಂತರವುಂಟು. ಆಂತರಿಕ ಭಾವ ವನ್ನು ಹೊರಗೆಡುಹುವದು ಸ್ವಭಾವ. ಬಾಹ್ಯ ಪರಿಸ್ಥಿತಿಗಳಿಗೆ ಅನುಕೂಲವಾಗಿ ಹೊಂದಿಕೊಂಡು ಹೋಗುವದು ನಡತೆ. ದುಷ್ಟ ಹಾಗೂ ಸುಷ್ಟ ಶಬ್ದಗಳನ್ನು ಸ್ವಭಾವಕ್ಕೆ ಹಚ್ಚಿ ಭೇದ ತೋರಿಸುವಂತೆ ನಡತೆಗೂ ಈ ಶಬ್ದಗಳನ್ನು ಹಚ್ಚಿ ಭೇದ ತೋರಿಸುವದರಲ್ಲಿ ಬರುವದು.

ಜ್ಞಾನ ಮಾನವನ ಪ್ರಗತಿಗೆ ಹಾಗೂ ವಿನಾಶಕ್ಕೂ ಇರುವದು. ಅದರ ಸದುಪಯೋಗ ಮಾಡಿಕೊಳ್ಳುವದು ಮಾನವತ್ವದಲ್ಲಿಯೇ ಇರುವದು. 'ನಮಗೆ ನಾವೇ ದೇವರಲ್ಲವೇ.' (Are we not all Gods to ourselves) ಎಂಬೀ ಭಾವನೆಯು ಮನದಲ್ಲಿ ಅಂಕುರಿಸಿ ಮೊಳಕೆಯಾದೊಡನೆ ಮಾನವತ್ವವನ್ನು ಗಾಳಿಗೆ ತೂರಿದಂತಾಗುವದು. ಜ್ಞಾನವನ್ನು ಪ್ರಗತಿಗೆ ಉಪಯೋಗಮಾಡಿಕೊಂಡರೆ ದೇವತೆಗಳಾಗುವೆವು; ವಿನಾಶಕ್ಕೆ ಅದನ್ನು

ಎಡೆಯಿಟ್ಟರೆ ದೈತ್ಯರಾಗುವೆವು. ಮಾನವನು ದೇವತೆಯೂ ಹೌದು ದೈತ್ಯನೂ ಹೌದು. ಜ್ಞಾನವನ್ನು ಉಪಯೋಗಮಾಡಿಕೊಳ್ಳುವ ರೀತಿಯಿಂದಲೆ ತಾನು ಯಾವ ಕುಲಕ್ಕೆ ಸೇರುವನೆಂಬುದನ್ನು ಮನುಷ್ಯನು ತೋರಿಸಿಕೊಡುವನು.

ದೇವತೆಗಳಿಗೂ ದೈತ್ಯರಿಗೂ ಜೀವನಪ್ರವಾಹವಿಲ್ಲ. ಪ್ರವಾಹ ವೆಂದೊಡನೆ ಹರಿಯುವ ಭಾವ ನಮ್ಮಲ್ಲಿ ಮೂಡುವದು. ಅವರಲ್ಲಿ ಹರಿಯುವ ಭಾವವೇ ಇಲ್ಲ. ಸ್ಥಾಯೀಭೂತಗುಣಗಳು ದೇವತೆಗಳಲ್ಲಿಯೂ ದೈತ್ಯರಲ್ಲಿಯೂ ಇರುವವು. ಆದರೆ ಮಾನವನಲ್ಲಿ ಸ್ಥಾಯೀಭೂತಗುಣಗಳಿಲ್ಲ. ಮಾನವನೆಂದರೆ ಪರಿವರ್ತನೆ ಹೊಂದತಕ್ಕ ಗುಣಗಳ ತವರೂರು. ಗುಣಗಳಲ್ಲಿ ವಿಪರ್ಯಾಸ ಭಾವನೆಯ ಪರಿವರ್ತನೆಯಿಂದ ಮಾನವನು ರಾಕ್ಷಸನಾಗ ಬಹುದು, ಪಶುಕಂಠನಾಗಬಹುದು, ಕುಂಭಕರ್ಣನಾಗಬಹುದು ಇಲ್ಲವೆ ಅವರೇ ನಾಮಧೇಯದ ರಾಕ್ಷಸನಾಗಬಹುದು. ಆ ರಾಕ್ಷಸನಾಮದಿಂದ ಕರೆದರೂ ಒಂದೇ. ವಿಪರ್ಯಾಸ ಭಾವನೆಯನ್ನು ತೊರೆದು ಸಮಯೋಚಿತ ಪರಿಪೂರ್ಣ ಭಾವದಿಂದ ನಡೆದುಕೊಂಡರೆ ಮಾನವನು ದೇವತೆಯಾಗಬಹುದು. ಮಾನವತ್ವ, ದೇವತ್ವ ಹಾಗೂ ರಾಕ್ಷಸತ್ವ ಈ ನಿಕಷಗಳಲ್ಲಿಯೇ ನಮ್ಮ ಜೀವನದ ಪ್ರವಾಹವಿರುವದು. ಮಾನವನು ತನ್ನ ಕಸ್ತಿಗೆ ತಾನೇ ಶಿಲ್ಪಿಯಾಗುವನು. ಆವನ ಅಸ್ತಿತ್ವವೇ ಕಲ್ಲು. ತನ್ನ ಜ್ಞಾನದಿಂದ, ಬುದ್ಧಿಸಂಶೋಧನೆಯಿಂದ, ಹಾಗೂ ಸುಪ್ತ ಸ್ವಭಾವದಿಂದ ಮಾನವನು ಶಿಲ್ಪಿಯಾಗಿ ತನ್ನ ಅಸ್ತಿತ್ವದ ಕಲ್ಲನ್ನು ಕಲ್ಲಾಗಿಡದೆ ಮೂರ್ತಿಮಾಡುವನು. ಮೂರ್ತಿಯ ಸೌಂದರ್ಯದ ವೈಖರಿ ಆತನ ಮಟ್ಟಿನ ಮೇಲೆ ಅವಲಂಬಿಸಿರುವದು.

ಈ ಸಂಕಲನದಲ್ಲಿಯ ಜೀವನಪ್ರವಾಹದಲ್ಲಿ ತೇಲುತ್ತಿದ್ದ ಜೀವಿಗಳನ್ನು ಅರಿಸಲು ನಿಮ್ಮ ಮನೋವೇದಿಕೆಯಮೇಲೆ ಬಿಟ್ಟಿರುವದು. ತನ್ನ ಮನಸ್ಸಿಗೆ ಬಂದದ್ದನ್ನು ಹೆಚ್ಚಾಗಿ ನಂಬತಕ್ಕದ್ದು ಮಾನವನ ನೈಜಸ್ವಭಾವ (Man believes more readily that which he prefers—Lord Bacon).

ಜೀವನವು ಒಂದು ಕಲೆಯು. ಜೀವನಪ್ರವಾಹದಲ್ಲಿ ಈಜುವದು ಬಿಗಿಲಾದದ್ದು. ಮಾನವತ್ವವಿದ್ದ ಮನುಷ್ಯನು ಈ ಬಿಗಿಲಾದ ಕಲೆಯನ್ನು

ಅರಿತಿರಬೇಕು. ಇದು ಆತನ ಆದ್ಯ ಕರ್ತವ್ಯ. ಪರರು ಇದನ್ನು ಕಲಿಸಲು ಅಸಮರ್ಥರು. ಈ ಜೀವನದ ಕಲೆಯನ್ನು ಅರುಹಿ, ತಿಳಿಸಿ, ಕಲಿಸಿಕೊಡುವ ಗುರು ತನಗೆ ತಾನೇ.

ಹೀಗೇಕೆ ಬರೆದಿರುವನೆಂಬ ಪ್ರಶ್ನೆಹಾಕಿಕೊಂಡು ಓದುಗರು ವಿಚಾರ ಮಾಡಬೇಕೆಂಬ ಹೇತುವಿನಿಂದ ಜೀವನ ಪ್ರವಾಹವನ್ನು ಪರಿಯಗೊಟ್ಟಿದ್ದು. ಜೀವನ ಪ್ರವಾಹಕ್ಕೆ ನೀರು ಬೇಕೆ ಎಂಬ ಪ್ರಶ್ನೆಗೆ ಬೇಕು ಹಾಗೂ ಬೇಡ ಎಂಬ ಎರಡುತ್ತರಗಳನ್ನು ಕೊಡಬೇಕಾಗುವದು. ನೀರಿದ್ದವನಿದ್ದರೆ ನೀರು ಬೇಕು. ನೀರಿಲ್ಲದೆ ಬತ್ತಿದವನಿದ್ದರೆ ಜೀವನಪ್ರವಾಹವು ಗುಪ್ತಗಾಮಿ ಯಾಗುವದು.

ಕೊನೆಗೆ ಫ್ರಾನ್ಸದೇಶದ ಹೆಸರುವಾಸಿಯಾದ ಕಲಾವಂತ Gide ಇವನು ತನ್ನ ಭೂಮಿಯ ಹಣ್ಣು (Fruits of Earth) ಎಂಬ ಪುಸ್ತಕದ ಮುನ್ನುಡಿಯಲ್ಲಿ ಹೇಳಿದ ವಾಕ್ಯವನ್ನು ಹೇಳಿ ಮುಗಿಸುವೆನು. "May my book teach you to care more for yourself than for it and then more all the rest than to your self."



ಜಗತ್ತಿನಲ್ಲಿ ಮಾನವನ ಹೊರ್ತುಪಡಿಸಿ ಯಾವವೇ ಜೀವಜಂತುಗಳಲ್ಲಿ ಆತ್ಮಹತ್ಯ ಮಾಡಿಕೊಳ್ಳಬೇಕೆಂಬ ಭಾವನೆ ಎಂದೂ ಪ್ರಾದುರ್ಭಾವ ಹೊಂದಿಲ್ಲ ಹಾಗೂ ಹೊಂದುವದಿಲ್ಲವೆಂದು ಖಂಡಿತವಾಗಿ ಹೇಳಬಹುದು. ಮಾನವನಲ್ಲೇಕೆ ಈ ಭಾವನೆಯ ಸುಳಿದಾಟ ? ಪಶುತ್ವಸ್ಥಿತಿಯಲ್ಲಿದ್ದ ಮಾನವನಲ್ಲಿಯೂ ಪಶು ಗಳಂತೆ ಈ ಭಾವನೆಯು ಒಡಮೂಡಿದ್ದಿಲ್ಲ. ಸಮಾಜದ ಬೆಳವಣಿಗೆಯಿಂದ ಮನುಷ್ಯನ ಸ್ಥಿತಿಗತಿಯಲ್ಲಿ ಬಹಳೇ ಬದಲಾವಣೆಯುಂಟಾಯಿತು; ಅದ ರಂತೆಯೇ ಆತನ ನಡೆಯಲ್ಲಿ, ನುಡಿಯಲ್ಲಿ, ವಿಚಾರದಲ್ಲಿ ಪ್ರಗತಿಯನ್ನು ಕಾಳಿತು. ಸಮಾಜವು ತನ್ನ ಬೆಳವಣಿಗೆಗೋಸ್ಕರ ಮಾನಮರ್ಯಾದೆಗಳನ್ನು ಕಲ್ಪಿಸಿತು. ಜೀವನಕ್ಕಿಂತ ಹೆಚ್ಚು ಪ್ರಾಶಸ್ತ್ಯ ಮಾನಮರ್ಯಾದೆಗೆ ಕೊಡ ಬೇಕೆಂಬ ಭಾವನೆಯನ್ನು ಸಮಾಜವು ತನ್ನ ಕೆಲವು ನಿಯಮಗಳ ರೂಢಿಯಿಂದ

ಮಾನವನ ಮನಸ್ಸಿನಲ್ಲಿ ಬಿಂಬಿಸಿತು. ಅನುವಂಶಿಕವಾಗಿ ಬಂದ ಈ ಭಾವನೆಯು ಮನುಷ್ಯನ ಅಣುರೇಣುಗಳಲ್ಲಿ ಸಂಚಾರ ಮಾಡಿ ಜೀವನಕ್ಕೆ ಅಂಟಿಕೊಂಡಿತು. ಸಮಾಜದಲ್ಲಿಯ ಮಾನಮರ್ಯಾದೆಗಳ ನಿಯಮಗಳ ಕಟ್ಟಳೆಗಳನ್ನು ತೆಗೆದೊಗೆದರೆ ಆತ್ಮಹತ್ಯೆ ಮಾಡಿಕೊಳ್ಳಬೇಕೆಂಬ ಭಾವನೆ ಅಳಿದುಹೋಗಬಹುದೆಂದು ಹೇಳಬಹುದು. ಬಾಲ್ಯಾವಸ್ಥೆಯಲ್ಲಿಯಾಗಲಿ ಕುಮಾರಾವಸ್ಥೆಯಲ್ಲಿಯಾಗಲಿ ಆವನಲ್ಲಿಯಾದರೂ ಈ ಆತ್ಮಹತ್ಯೆಯ ಭಾವನೆಯು ಬಿಂಬಿಸುವದಿಲ್ಲ. ತಿಳುವಳಿಕೆಯ ರಥವನ್ನೇರಿ ಸಮಾಜದಲ್ಲಿ ಅಲೆದಾಡುತ್ತಲೇ ಮಾನವನಲ್ಲಿ ಮಾನಮರ್ಯಾದೆಗಳ ಭಾವ ತಲೆದೋರುತ್ತವೆ. ಅವಳಿಗೆ ರೋಗದ [illegible] ಆಸೆ ಕೊಟ್ಟರೂ ಬಾಧಕ ಎಂಬ ಭಾವನೆಯನ್ನು ಸಮಾಜವು ಪ್ರತಿಯೊಂದು ವ್ಯಕ್ತಿಯ ವ್ಯಕ್ತಿತ್ವದ ಅಣುರೇಣುಗಳಲ್ಲಿ ಸಂಚರಿಸಲು ಪ್ರಚೋದಿಸುವದು. ಈ ಭಾವನೆಗೆ ಸಮಾಜವೇ ಮೂಲಭೂತ

ಮಾನವನಿಗೆ ಮರ್ಯಾದೆ, ಮನುಷ್ಯನಿಗೆ ಮಾನ ಎಂಬ ಭಾವನೆಯನ್ನು ಸಮಾಜವು ಕಲ್ಪಿಸಿತು. ಅಂಗನೆಗೆ ಪತಿವ್ರತತ್ವವೇ ಮರ್ಯಾದೆ, ಮನುಷ್ಯನಿಗೆ ಮಾನವೇ ಭೂಷಣವು. [illegible] ಬದುಕಬಹುದು; ಕಳೆದುಕೊಂಡ ಮರ್ಯಾದೆಯನ್ನು ತಿರುಗಿ ಪಡೆವುದು ಅಸಂಭವ. ಅಂತೆಯೇ ಮರ್ಯಾದೆ ಹೋದರೆ ಅಂಗನೆಯ ಬುದ್ಧಿ ಮಂಗನಂತಾಗಿ ಆತ್ಮಹತ್ಯೆ ಮಾಡಿಕೊಳ್ಳಬೇಕೆಂಬ ಭಾವನೆ ಉದಯವಾಗುವದು.

× × × ×

ಗರ್ಭಧಾರಣವಾಗಿ ಒಂದು ವರುಷದ ಮೇಲೆ ಹೆರಲು ಶಕ್ಯವೋ ಎಂದು ಕೇಳಬಹುದು. ನಾವೆಲ್ಲರೂ ನವಮಾಸವನ್ನು ಹೊತ್ತು ಹೆತ್ತ ಸಂಗತಿಗಳನ್ನು ನೋಡಿರುವೆವು ಕಂಡಿರುವೆವು. ನಾವು ಮಾತಿನಲ್ಲಿ ನಿನ್ನ ತಾಯಿಯು ನಿನ್ನನ್ನು ಮೂರುಒಂಬತ್ತು ತಿಂಗಳು ಹೊತ್ತಿರುವಳೋ ಎಂದು ಅನ್ನುವ ವಾಡಿಕೆಯು ಉಂಟು. ಗರ್ಭಧಾರಣವಾದ ಒಂದು ವರುಷದ ಮೇಲೆ ಹೆರಲು ಶಕ್ಯವೆಂದು ಹೇಳಬಹುದು. ಟಾಯಲರನು ಬರೆದ Medical Jurisprudence ದಲ್ಲಿ ಕೆಲವು ಹೆಂಗಸರು ಗರ್ಭಧಾರಣದಿಂದ ಒಂದು ವರುಷದ ಮೇಲೆ ಹಡೆದ ಸಂಗತಿಗಳಿರುವವೆಂದು ವಿಶದಪಡಿಸಿರುವನು. ಅಮೇರಿಕಾ ದೇಶದಲ್ಲಿ ನಡೆದ

x

“Commonwealth vs. Porter” ಮೊಕದ್ದಮೆಯಲ್ಲಿ ಒಂದು ವರುಷದ ವರೆಗೆ ಗರ್ಭಧಾರಣ ಮಾಡಿ ಹೆರಬಹುದೆಂದು ಆಗಿನ ಡಾಕ್ಟರು ಕೊಟ್ಟ ಪುರಾವೆಯ ಮೇಲಿಂದ ನಿರ್ಣಯವಾಯಿತು.

× × × ×

ಮುದ್ದು ಮುರಲೀಧರನ ಮೇಲಿನ ಮಮತೆಯಿಂದ ಪಾತು ಆತ್ಮಹತ್ಯ ಮಾಡಿಕೊಳ್ಳಬೇಕೆಂಬ ವಿಚಾರ ಬಿಟ್ಟು ನಿದ್ರೆ ಹೋಗಲಿಲ್ಲ. ಹೃದಯದಲ್ಲಿದ್ದ ರಕ್ತದ ನಾಳಗಳ ಉಪಶಾಖೆಗಳು ಹೆಚ್ಚಾಗಿ ಹೆಂಗಸರ ಸ್ತನಗಳಲ್ಲಿ ಇರುವವು. ಮಾಂಸಕರಣೆ ಹಾಗೂ ರಕ್ತದ ನಾಳಗಳ ಸಮೂಹದಿಂದುಂಟಾಗಿರುವದು ಅಂಗನೆಯರ ಕುಚ. ಬಾಲಕರಿಗೆ ಹೊಟ್ಟೆಗುಣಿಸುವವರಿಂದ ನಾಳಗಳಿಗೆ ತಾಡನ ಮಾಡಿದಂತಾಗಿ ರಕ್ತಪ್ರವಾಹವು ಜೋರಿನಿಂದ ಮಿದುಳಿಗೆ ಹೋಗಿ ತಲಪುವದು. ವಿಚಾರಗಳ ಲಯವೇ ನಿದ್ರೆ. ರಕ್ತದ ಒತ್ತಡದಿಂದ ವಿಚಾರ ಲಯವಾಗಿ ಪಾತು ನಿದ್ರೆಹೋದಳು. ಮಮತೆಯಿಂದ ನಿದ್ರೆ ಹೋದಳೆಂದು ನಾವು ಊಹಿಸಬಹುದು.

೨

ಸಾಮಾನ್ಯ ಮಾನವನ ಆಚಾರ-ವಿಚಾರಗಳು ಆರ್ಥಿಕ ಪರಿಸ್ಥಿತಿಯನ್ನು ಹೆಚ್ಚಾಗಿ ಅವಲಂಬಿಸಿರುವವು. ಆತನ ಜೀವನದ ಧರ್ಮ, ಆರ್ಥಿಕ ಧರ್ಮದ ಮೇಲೆ ನಿಲ್ಲುವದು. ಈ ಮಾರ್ಗವನ್ನು ಅನುಸರಿಸುವ ಜನಗಳಲ್ಲಿ ಸ್ವಾಭಿಮಾನವು ಅಳಿದು ಹೋಗಿ ಕೀಳುತನದ ಭಾವನೆಗಳು ನೆಲೆಗೊಳ್ಳುವವು.

ಆರ್ಥಿಕ ಪರಿಸ್ಥಿತಿಯು ಹದಗೆಟ್ಟ ಜನರಲ್ಲಿ, ಮೊದಲೇ ಸೇವಾವೃತ್ತಿಯಲ್ಲಿಯೇ ನಿರತರಾಗಿದ್ದರೆ, ಆ ವೃತ್ತಿಯೇ ತಮ್ಮ ಜೀವನದುಸಿರು ಮಾಡಿಕೊಂಡದ್ದು ಕಂಡುಬರುವದು. ಅವರ ದೇವರೇ ಸೇವೆಯ ಯಜಮಾನ, ಅವರ ಜೀವನದ ಓಂಕಾರವೇ ಯಜಮಾನನ ಮನವೊಲಿಸಿಕೊಳ್ಳುವದು. ಯಜಮಾನನಲ್ಲಿಯೂ ತಮ್ಮಲ್ಲಿಯೂ ಭೂಮ್ಯಾಕಾಶಗಳಷ್ಟು ಅಂತರವಿರುವದೆಂದು ದೃಢವಾಗಿ ನಂಬಿಕೊಂಡು ನಾನಾ ತರಿಯೋಚನೆಗಳಿಂದ ಆತನ ಪ್ರೀತಿ ಇಲ್ಲವೆ ಮರ್ಜಿ ಸಂಪಾದಿಸಲು ಹೊಸ ಹೊಸ ಮಾರ್ಗಗಳನ್ನು ಈ ಜನರು ಹುಡುಕುವರು.

ಸೇವಾಧರ್ಮವು ಅಗಮ್ಯ. ಸಾಹೇಬಮಯಂ ಜಗತ್ ಎಂಬುದು ಅವರ ವೇದಾಂತ. ಈ ವೇದಾಂತದಲ್ಲಿಯೇ ಅವರಿಗೆ ಸಾಹೇಬರ ಸಾಕ್ಷಾತ್ಕಾರವಾಗಬೇಕು. ಕಾಳಪ್ಪನಂತಹ ಜನರು ಸೇವಾ 'ಧರ್ಮಸಿಂಧು'ವಿನಲ್ಲಿ ಸಾಹೇಬರ ಆಚಾರ-ವಿಚಾರಗಳ ಮೇಲಿಂದ, ನಡೆನುಡಿಗಳ ಮೇಲಿಂದ ಸೇವಾನಿಯಮಗಳನ್ನು ಕಲ್ಪಿಸಿ ಸೇರಿಸಿಕೊಳ್ಳುವರು. ಇಂತಹ ಜನರು ಹೇಗೆ ನಡೆಯುವರೆಂಬುದು ಹೇಳಲು ಅಸಾಧ್ಯ. ಕೇಳು ಹಾಗೂ ಹೇಯವೆಂಬ ಮಾರ್ಗಗಳು ಅವರ ಸೇವಾಧರ್ಮದಲ್ಲಿಯೇ ಇರುವದಿಲ್ಲ. 'What is good for that purpose is finally good and what is bad for that purpose is finally evil' ಎಂದು ಹೇಳಬಹುದು. (Edward Carpenter, Civilization, its cause and cure. P. 249).

ಮಾನವರ ಸ್ವಭಾವವನ್ನು ಅರಿತುಕೊಳ್ಳುವದು ದೇವರಿಗೂ ಕೂಡ ಅಸಾಧ್ಯ. Lick above and kick below ಎಂಬುವದು ಅವರ ಗುರುಮಂತ್ರ.

4

ಪ್ರತಿಯೊಬ್ಬ ಮಾನವನ ಜೀವಮಾನದಲ್ಲಿ ಒಂದಿಲ್ಲೊಂದು ಸಮಸ್ಯೆ ಉದ್ಭವಿಸಿ ಆತನನ್ನು ಸಂಮೂಢ ಚೇತನವುಳ್ಳವನಾಗಿ ಮಾಡುವದುಂಟು. ಅರ್ಜುನನಿಗೆ ಕುರುಕ್ಷೇತ್ರ ರಣಾಂಗಣದಲ್ಲಿ ಒದಗಿದ ಸಮಸ್ಯೆ ಭಿನ್ನ ಭಿನ್ನ ರೀತಿಗಳಿಂದ ಪ್ರತಿಯೊಬ್ಬನ ಜೀವಮಾನದಲ್ಲಿ ಒದಗುವದುಂಟು. ಸಮಸ್ಯೆಯ ರೀತಿ ಭಿನ್ನವಾದರೂ ಮನಸ್ಸಿನ ವ್ಯಾಕುಲತೆ ಒಂದೇ ಪರಿಯಲ್ಲಿರುವದು. ಅರ್ಜುನನ ಸಮಸ್ಯೆಯನ್ನು ಬಿಡಿಸಿ ಯುಕ್ತಮಾರ್ಗವನ್ನು ಕೈಕೊಂಡು ನಡೆಸಲು ಜ್ಞಾನರೂಪಿಯಾದ ಕೃಷ್ಣನು ಆತನಿಗೆ ಸಹಾಯಕನಾದನು. ಭಾವನೆಯನ್ನು, ರಾಗವನ್ನು ಹಾಗೂ ಕಳುಲಾತಿಯನ್ನು ಬದಿಗಿರಿಸಿ, ಸಮಸ್ಯೆಯನ್ನು ಅತೀವ ಸೂಕ್ಷ್ಮದೃಷ್ಟಿಯಿಂದ ಪೃಥಕ್ಕರಣ ಮಾಡಿ, ಜೀವನದ ಧ್ಯೇಯ ಹಾಗೂ ಅದನ್ನು ಸಾಧಿಸಲು ಕೈಕೊಳ್ಳುವ ಸಾಧನಗಳನ್ನು ಅರ್ಜುನನ

ವಿಷಯದಲ್ಲಿ ಜ್ಞಾನವು ಕಲ್ಪಿಸಿಕೊಟ್ಟಿತು. ಪ್ರತಿಯೊಬ್ಬನ ಜ್ಞಾನದ ಪ್ರಗತಿಯಲ್ಲಿ ವೈಷಮ್ಯದ ರೀತಿ ಇದ್ದ ಮೂಲಕ ಧ್ಯೇಯ ಹಾಗೂ ಅದನ್ನು ಸಾಧಿಸಲು ಕೈಕೊಳ್ಳುವ ಸಾಧನಗಳಲ್ಲಿ ಭಿನ್ನ ಭಿನ್ನ ರೀತಿ ಹಾಗೂ ವೈಷಮ್ಯ ಭಾವ ಕಂಡುಬರುವದು.

ಅಸುವಾದವವರು (Existentialists) ಮಾನವನು ತನ್ನ ಜೀವನದ ಶಿಲ್ಪಿ ತಾನೇ ಎಂದು ಹೇಳುವರು. ಇದು ಮನುಷ್ಯನ ಅಂತರಂಗದ ಮನೋವ್ಯಾಪಾರವನ್ನು ಅವಲಂಬಿಸಿಲ್ಲ. ಅಂತರಂಗದ ಮನೋಭಾವನೆಗಳನ್ನೂ ವಿಚಾರಗಳನ್ನೂ ಬಹಿರಂಗದ ವಸ್ತುಸ್ಥಿತಿಗಳಲ್ಲಿ ಜೋಡಿಸಬೇಕೆಂಬ ಆಶಯೇ ಇಚ್ಛಾಶಕ್ತಿಯೇ ಮಾನವನ ಜೀವನದ ಅಸ್ತಿತ್ವ. ತಾನು ಯಾರು ಹಾಗೂ ತಾನು ಕೈಕೊಳ್ಳತಕ್ಕ ಮಾರ್ಗ ಯಾವುದು—ಇವೆರಡರ ಮೇಲೆ ಮಾನವನ ಅಸ್ತಿತ್ವ ಇರುವದೆಂದು ಹೇಳಬಹುದು. ಮನುಷ್ಯನ ಬಯಕೆಯ ಮೇಲೆ ಆತನ ಅಸ್ತಿತ್ವವಿರುವದಿಲ್ಲ. ಇಚ್ಛೆ ಹಾಗೂ ಆಶೆಗಳಲ್ಲಿ ಮಾನವನು ಒಂದು ಮಾರ್ಗವನ್ನು ಕೈಕೊಂಡಿರುವನೆಂಬುವದು ಅಡಕವಾಗಿರುವದು. ಇದು ಮನಬಂದಿಯದ ಮಾರ್ಗವಲ್ಲ; ಮನ ಅರಿತ ಮಾರ್ಗವಿರುವದು. ಮಾನವನು ತನ್ನ ಅಸ್ತಿತ್ವದ ಭಾರವನ್ನು ತಾನೇ ಹೊರಬೇಕಲ್ಲದೆ ಪರರ ಬೆನ್ನಮೇಲೆ ಭಾರವನ್ನಿಟ್ಟು ಜೀವಿಸಲಾರನು. ತಾನು ಕೈಕೊಂಡ ಅಸ್ತಿತ್ವದ ಮಾರ್ಗಕ್ಕೆ ತಾನೊಬ್ಬನೇ ಅಧಿಕಾರಿಯಲ್ಲ. ಅದು ಸಕಲ ಜನರಿಗೂ ತೆರೆದಿಟ್ಟ ಮಾರ್ಗ. ನಾವು ಯಾವದೇ ಒಂದನ್ನು ಕೈಕೊಳ್ಳುವದು ನಮಗಾಗಿಯೂ, ಸಕಲ ಜನಗಳಗಾಗಿಯೂ ಇರುವದು.

ಮಾನವನು ತನ್ನ ನೈಜಭಾವದ ರಥಕ್ಕೆ ಬುದ್ಧಿವಂತಿಕೆಯ ಕುದುರೆಯನ್ನು ಹೂಡಿದರೆ ಜೀವನದ ಅಸ್ತಿತ್ವದ ಮಾರ್ಗವು ಸರಳವಾಗಿ ಸಾಗುವದೆಂದು ಹೇಳಬಹುದು. ಬುದ್ಧಿಯು ಭಾವನೆಗೆ ಶರಣಾಗತವಾದರೆ, ತತ್ವಗಳನ್ನು ಮಾನವನು ತನ್ನ ಮಾನವತ್ವಕ್ಕೆ ಉಪಯೋಗಿಸಿಕೊಳ್ಳದೆ ರಾಕ್ಷಸತ್ವಕ್ಕೆ ಉಪಯೋಗಿಸಿಕೊಳ್ಳುವನೆಂದು ಹೇಳಬಹುದು; ಇಲ್ಲವೆ ತನ್ನ ಅಸ್ತಿತ್ವವನ್ನೇ ನಾಶಮಾಡಿಕೊಳ್ಳುವನೆಂದು ಅನ್ನಬಹುದು.

× × × ×

ತಮ್ಮ ಅಸ್ತಿತ್ವಕ್ಕೆ ಆನಂದವನ್ನು ಕೊಡುವರು. ಇಂತಹ ಭಾವನೆಗೆ ವಿಪರ್ಯಸ್ತ ಕಾಮವೃತ್ತಿಯೆಂದು ಅನ್ನಬಹುದು. ತಾಯಿಯು ಮಕ್ಕಳ ಕಾಮಭಾವದಲ್ಲಿ ಆನಂದ ತೆಗೆದುಕೊಳ್ಳುವ ಕೆಲವು ಸಂಗತಿಗಳುಂಟು. ನಾರಿಯಲ್ಲಿ ಈ ತರಹದ ಭಾವನೆ ಕಂಡುಬರುವದು.

ಯಂತ್ರತಂತ್ರ ಮಂತ್ರಗಳಲ್ಲಿ ಇಪ್ಪತ್ತನೇ ಶತಮಾನದ ಜನರು ನಂಬುವದು ಕಡಿಮೆ. ಯಾಂತ್ರಿಕ ಯುಗದಂತೆ ತಾಂತ್ರಿಕ ಯುಗವೊಂದು ನಮ್ಮಲ್ಲಿ ಆಗಿಹೋಯಿತು. ತಾಂತ್ರಿಕ ಯುಗದಲ್ಲಿ ಯಂತ್ರ ತಂತ್ರ ಮಂತ್ರಗಳಿಗೆ ಪ್ರಾಮುಖ್ಯತೆ ಹೆಚ್ಚು. ಇವುಗಳನ್ನು ಮಾನವತ್ವಕ್ಕೂ, ರಾಕ್ಷಸತ್ವಕ್ಕೂ ಉಪಯೋಗಮಾಡಿಕೊಳ್ಳಬಹುದು. ಇಂದಿಗೂ ಮದ್ದುಚಾಡಿಗಳನ್ನು ಯಂತ್ರ ಮಂತ್ರಗಳಿಂದ ಮಾಡುವದುಂಟು. ಮಹಾನಿರ್ವಾಣ ತಂತ್ರ, ಗೌತಮೀಯ ತಂತ್ರ, ಕಾಲೀತಂತ್ರ ಮೊದಲಾದ ಯಂತ್ರ ತಂತ್ರ ಮಂತ್ರಗಳನ್ನು ವಿಶದಪಡಿಸುವ ಗ್ರಂಥಗಳನ್ನು ಪರಿಶೀಲಿಸಿದರೆ ನಮ್ಮ ವಿಚಾರಕ್ಕೆ ಪ್ರಚೋದನ ಸಿಗುವದು.



ಅಂತರಂಗದ ವಿಚಾರಗಳಿಂದ ದೇಹದ ಬಾಹ್ಯ ಅಂಗಾಂಗಗಳು ಬದಲಾವಣೆಯನ್ನು ಹೊಂದುವಂತೆ ಆರ್ಥಿಕ ಪರಿಸ್ಥಿತಿಯಿಂದ ಮನುಷ್ಯನ ಸ್ವಭಾವದಲ್ಲಿ ಬದಲಾವಣೆಯಾಗುವದು. ಸ್ವಭಾವದಲ್ಲಿಯ ಪರಿವರ್ತನೆಯು ಮನುಷ್ಯನ ಧ್ಯೇಯದಲ್ಲಿಯೂ, ಆತನು ಕೈಕೊಳ್ಳುವ ಮಾರ್ಗದಲ್ಲಿಯೂ ಭಿನ್ನರೂಪಾಂತರವನ್ನು ಕೊಡುವದು. ಈ ಭಿನ್ನರೂಪಾಂತರದಿಂದ ಆ ಮನುಷ್ಯನ ಅಸ್ತಿತ್ವದಲ್ಲಿಯೆ ಒಂದು ತರಹದ ಮಾರ್ಪಾಡಾಗುವದು. ಈ ತರಹದ ಪರಿವರ್ತನೆಯು ಉದ್ರೇಕಗಳ ಸುಳಿಪಾಟದಿಂದ ಬುದ್ಧಿವಂತಿಕೆಯಿಂದ ಘಟಿಸಿದ್ದು ಅಲ್ಲ.

ನಾವಿರತಕ್ಕ ಸಮಾಜವನ್ನು ಆರ್ಥಿಕ ಪರಿಸ್ಥಿತಿಯು ಅವಲಂಬಿಸಿರುವದು. ನಮ್ಮನ್ನು ಬಿಟ್ಟು ಸಮಾಜವಿಲ್ಲ; ಸಮಾಜ ಬಿಟ್ಟು ನಾವಿಲ್ಲ. ತಾನು ಮತ್ತು ಸಮಾಜ—ಇವುಗಳ ತಿಕ್ಕಾಟದಲ್ಲಿಯೇ ಮನುಷ್ಯನ ಅಸ್ತಿತ್ವದ ನಾಶ; ಹೊಂದಿಕೊಂಡಿರುವದೇ ಅಸ್ತಿತ್ವದ ಪ್ರವಾಹ. ಸಮಾಜಕ್ಕೂ ತನಗೂ

ಇರುವ ನಿಕಟಸಂಬಂಧವನ್ನು ಕಡಿದೊಗೆಯಲು ಸಾಮಾನ್ಯ ಮನುಷ್ಯನಿಗೆ ಸಾಧ್ಯವಿಲ್ಲ.

ಸಮಾಜದ ನೀತಿಯೇ ಬೇರೆ; ಅಂತರಾತ್ಮನ ನೀತಿಯೇ ಬೇರೆ. ತನ್ನ ಜೀವನಕ್ಕಾಗಿ ಕಟ್ಟಿಕೊಂಡ ಗೋಡೆಗಳ ತಳಹದಿಯೇ ಸಮಾಜದ ನೀತಿ; ಮಾನವನ ಆಂತರಿಕ ನೀತಿ ಯಾವ ಯುಗದಲ್ಲಿಯಾದರೂ ಒಂದೇ. ಸಮಾಜದ ಇಂದಿನ ನೀತಿ ನಾಳೆ ಅನೀತಿಯಾಗಬಹುದು. ಇದು ಅಂತರಾತ್ಮನ ನೀತಿಯಲ್ಲಿ ಆಗಲಾರದು. ಇದೇ ಮಾನವತ್ವದ ತಳಹದಿಯು.

ಮಾನವ ಸಂವರ್ಧನೆಗಾಗಿ ಸಮಾಜದ ನೀತಿಯನ್ನು ಮುರಿಯಲು ನಾವು ಹೆದರುವೆವು. ಅಂತರಾತ್ಮನ ನೀತಿ ಮಾರ್ಗವನ್ನು ನಾವು ತ್ಯಜಿಸಿದರೆ ನಾವು ಅಪರಾಧಿಗಳೆಂಬ ಭಾವನೆ ನಮ್ಮ ಹೃದಯದಲ್ಲಿ ಕೊರೆಯುತ್ತಿರುವದು. ಅಂತೆಯೇ It is the privilege of man to feel guilty ಎಂದು Hegel ನ ಉಕ್ತಿಯು. ವಿಶ್ವದ ಈಶ್ವರನೆಂದು ಹೆಸರಿದ್ದರೂ ಕಲ್ಲೊಳಗಿನ ಕಪ್ಪೆಯಾಗಿ ಚಿಪ್ಪಿಯಲ್ಲಿಯ ನೀರಿಗೆ ಹಾತೊರೆಯುತ್ತಿದೆ. ಕೊನೆಗೆ ಹೇಳುವದೇನೆಂದರೆ- The sacrifice of moral dignity to economic interest, of mind to money as benefactions conferred upon us by modern civilization, (Alexis Carral. Man the unknown. P. 258)

೩

ಪ್ರಗತಿಪರ ನೀತಿ; ಅಪ್ರಗತಿಪರ ಅನೀತಿ ಇಲ್ಲಿ ವಿಶದಪಡಿಸಿರುವದು ಆಂತರಿಕ ಜೀವನಕ್ಕೆ ಸಂಬಂಧಪಟ್ಟುದು. ಸಮಾಜದ ನೀತಿ ವಿಕಾಸಹೊಂದುವದಿಲ್ಲ; ಆಂತರಿಕ ನೀತಿ ವಿಕಾಸಹೊಂದುವದು. ಗುಲಾಬಿಯ ಮೊಗ್ಗೆ ಅರಳಿ ಪ್ರಫುಲ್ಲಿತ ಹೂವಾದರೆ ಮೊಗ್ಗೆ ವಿಕಾಸಹೊಂದಿತೆಂದು ಅನ್ನುವೆವು. ವಿಕಾಸತ್ವವು ಮೊಗ್ಗೆಯಲ್ಲಿಯ ನೈಸರ್ಗಿಕಗುಣವು; ಹಾಗೆಯೇ ವಿಕಾಸಹೊಂದುವ ಗುಣವು ಮಾನವನ ಮಾನವತ್ವದಲ್ಲಿ ಹುದುಗಿಕೊಂಡಿರುವದು. ಸಮಾಜದ ನೀತಿಗೆ ವಿಕಾಸವಿಲ್ಲ; ಬದಲಾವಣೆಯುಂಟು. ವ್ಯಕ್ತಿಯು ಸಮಾಜದ ಘಟಕವಾದರೂ ಹಲವಾರು ಸಾರೆ ತನ್ನ ವ್ಯಕ್ತಿಯ ವಿಕಾಸಕ್ಕಾಗಿ ಆಂತರಿಕ

ಜೀವನದ ಬೆಳವಣಿಗೆಗಾಗಿ ಸಮಾಜದ ನೀತಿಯನ್ನು ಉಲ್ಲಂಘಿಸಿ ತನಗೆ ಅನುಕೂಲವಾಗುವ ನೀತಿಯನ್ನು ಕಲ್ಪಿಸಿಕೊಳ್ಳುವನು. ಈ ನೀತಿ ತನಗೆ ಪಥ್ಯಕರವಾಗಿದ್ದರೆ ಸಮಾಜವು ಸಹಿಸಿ ಅವನ್ನು ತನ್ನ ಸಾಮೂಹಿಕ ಜೀವನದಲ್ಲಿ ಬೆರೆಸಿಕೊಳ್ಳುವದು; ಆದರೆ ಅದೇ ಅಪಥ್ಯಕರವಾಗಿದ್ದರೆ ತನ್ನ ಸಾಮೂಹಿಕ ಬಲದಿಂದ ಅವನ್ನು ನಾಶಗೊಳಿಸಲು ಹಿಂದು ಮುಂದೆ ನೋಡಲಾರನು.

ಜೀವದಿಂದ ಜೀವದ ಉತ್ಪತ್ತಿಗೆ ಲೈಂಗಿಕ ಕಾಮನೆಯೆ ಕಾರಣ. ಈ ಕಾಮನೆಯು ಸ್ವಾರ್ಥಪರ ಹಾಗೂ ಅಸ್ವಾರ್ಥಪರ ಇರುವದು. ಆದರ ನೈಜಭಾವಕ್ಕೆ ಅಸ್ವಾರ್ಥಪರವೆಂದು ಹೇಳಬಹುದು. ನೈಜಭಾವದ ಪ್ರವಾಹೀ ರೂಪದಿಂದಲೇ ಮಾನವನ ಬೆಳವಣಿಗೆ.

ಮಾನವನ ಸ್ವಭಾವ ನಿಂತ ನೀರಲ್ಲ; ಸ್ವಚ್ಛಂದದಿಂದ ಹರಿಯುವ ಪ್ರವಾಹ, ಪ್ರವಾಹವನ್ನು ಕಟ್ಟಿ ನಿಂತ ನೀರಿನ ಕೊಂಡವನ್ನು ಮಾಡುವದು ನಮ್ಮ ಕೈಯಲ್ಲಿಯೇ ಇರುವದು. ಕೊಂಡದ ನೀರು ಕೆಲವು ಕಾಲ ಉಪಯೋಗವಾಗಬಹುದು. ಕಾಲವು ಗತಿಸಿದಂತೆ ಕೊಂಡದ ನೀರು ಕೊಳಚಿ ನಾರಹತ್ತುವದು. ಅದು ನಾರಹತ್ತಿರುವದೆಂಬುದು ನಮಗೆ ತಿಳಿಯುವದು ಕಠಿಣ; ಅದೇ ನೀರಿನ ಉಪಯೋಗಕ್ಕೆ ನಾವು ಹೊಂದಿಕೊಂಡಿದ್ದರಿಂದ ಅದರ ದೋಷವನ್ನು ಕಂಡುಹಿಡಿಯಲು ನಮಗೆ ದುಸ್ತರವಾಗುವದು.

'of every tree in the garden thou mayest freely eat, but of the tree of knowledge of good and evil, thou shalt not eat of it, for in the day that thou eatest thereof thou shalt surely die' ಎಂಬುದು ಬಾಯಬಲ್ಲಿನಲ್ಲಿಯ ಉಕ್ತಿಯು. ಇದನ್ನು ಒಪ್ಪಿಕೊಳ್ಳುವದು ಕಠಿಣ. ಸಾಧು-ಅಸಾಧುಗಳ ಘರ್ಷಣೆಯಲ್ಲಿಯೇ, ತಿಕ್ಕಾಟದಲ್ಲಿಯೇ, ಚಕಮಕಿಯಲ್ಲಿಯೇ ಮಾನವನ ಅಸ್ತಿತ್ವವಿರುವದು. ಮಾನವನ ದ್ಯೋತಕನೇ ಜ್ಞಾನ. ಜ್ಞಾನವನ್ನು ಅಲ್ಲಗಳೆದ ಮೇಲೆ ಕಗ್ಗತ್ತಲೆಯಲ್ಲಿ ಹುಟ್ಟುಗುರುಡನು ದಾರಿ ದೂಡಿದಂತೆ ಮಾನವನ ಸ್ಥಿತಿಯಾಗುವದು ಜ್ಞಾನ ಎರಡೂ ಕಡೆಗೆ ಹದನಾದ

ಕಮಾನುಗಳುಳ್ಳ ಖಡ್ಗ, ಬಾಣ ಜೋಡಿಸುವ ಶಕ್ತಿ ಜನ್ಮದಾರಭ್ಯ ನರನಾಳಗಳಲ್ಲಿ ಸಂಚಾರ ಮಾಡುವವು.

ರತಿಮಾರರ ಸುಳಿದಾಟ ಮಾನವರಲ್ಲಿ ಜ್ಞಾನದಿಂದಲ್ಲ; ಸ್ವಭಾವ ಗುಣ, ಸಹಜಭಾವ ಎಂದು ಕರೆಯಬಹುದು. ಈ ಸುಳಿದಾಟಕ್ಕೆ ವಯಸ್ಸಿಲ್ಲ, ಕಾಲವಿಲ್ಲ; ಜೀವದಲ್ಲಿಯೇ ಬೆರೆತು ಕುಣಿದಾಡುವವು. ಇವರ ಸುಳಿದಾಟದಿಂದ ಜನಿಸುವ ಆಟಕ್ಕೆ ನಿಸರ್ಗದಾಟವೆಂದು ಅನ್ನಬಹುದು. ಇದು ಪೂರ್ವಜರು ಹಾಕಿಕೊಟ್ಟ ಪಾಠವಲ್ಲ; ಸಮಾಜದ ಶಾಸನವಲ್ಲ; ಬೇರಾವ ರೀತಿಯಿಂದ ತಿಳಿಯಬೇಕಾದ [illegible]. ಜೀವನವೆಂಬುವದರಲ್ಲಿಯೇ ರತಿಮಾರರ ಭಾವ ಅಡಕವಾಗಿರುವದು. ಅನೇಕಯುಗದ ತಲೆಗಳಿಂದ ಇವರ ಸುಳಿದಾಟವು ಜೀವನದಲ್ಲಿ ನಡೆಯುತ್ತಿರುವದರಿಂದ ಈ ಅನಂಗ ಶಕ್ತಿಯೂ ಜೀವನದ ಭಾಗವು; ಜೀವನದಲ್ಲಿಯೇ ಹುಟ್ಟಿ ಜೀವನಕ್ಕೆ ಅಂಟಿಕೊಂಡದ್ದು ಜೀವನದ ಭಾಗವು. ಜೀವನದಲ್ಲಿ ಇದನ್ನು ಜೀವನದ [illegible] ನೋಡಬೇಕು. ಈ ಸುಳಿದಾಟವನ್ನು ಒತ್ತಾಯದಿಂದ, ಮೋಹದಿಂದ [illegible] ಶಕ್ತಿಗಳಿಂದ ಬಗೆಹರಿಸಿ [illegible] ಚವುಟಿ ಹೊಂದಿಕೊಂಡವು [illegible].

× × × ×

ಒಂದು ಜೀವಿಯಿಂದ ಜನಿಸತಕ್ಕದ್ದು ಸಜಾತೀಯ ಜೀವವೆಂದು ಸಾಮಾನ್ಯವಾಗಿ ಸೃಷ್ಟಿಯ ನಿಯಮ. ಮಾನವನಿಂದ ಮಾನವ, ಕಪಿಗಳಿಂದ ಕಪಿ, ಮೃಗಗಳಿಂದ ಮೃಗ ಹೀಗೆ ಸರ್ವಸಾಮಾನ್ಯ ನಿಯಮ. ಮಾನವನು ಹಾವು ಹಡೆಯುವದುಂಟೇ? ಎಂದು ಸಹಜವಾಗಿ ಕೇಳುವ ಪ್ರಶ್ನೆ. ಹಾವು ಹಡೆದದ್ದು ಕೆಲವರು ಕೇಳಿದ್ದೂ ಉಂಟು; ಮತ್ತೆ ಕೆಲವರು ನೋಡಿದ್ದೂ ಉಂಟು. ಇದು ವಿಜ್ಞಾನಕ್ಕೆ ನಿಲುಕಲಾರದ ಅಗಮ್ಯ ವಿಷಯ. ಬಾಹ್ಯೇಂದ್ರಿಯಗಳನ್ನು ಪ್ರತ್ಯಕ್ಷಪ್ರಮಾಣವಾಗಿಟ್ಟುಕೊಂಡು ವಿಜ್ಞಾನಶಾಸ್ತ್ರವು ತನ್ನ ಪ್ರಮೇಯಗಳನ್ನು ಮಂಡಿಸುವದು. ಶ್ರೀಮಾನ್ Levy ಅವರು The Universe of Science, ಎಂಬ ಗ್ರಂಥದಲ್ಲಿ science can offer no finality ಎಂದು ಹೇಳಿದ್ದು ಸಮಂಜಸವೆನಿಸುವದು.

ಇಲ್ಲಿ ಹಾವಿನ ಜನನವನ್ನು ರೂಪಕಸೃಷ್ಟಿಯಿಂದ ಸಾಧಿಸಿದ್ದು ಇರುವದು. ಮನುಷ್ಯನ ದೃಷ್ಟಿಕೋನವು ಬದಲಾಗುವದಕ್ಕಿಂತ ಸಾಸಿರಾರು ವರುಷಗಳ ಮುಂಚಿತ ರತಿಮಾರರ ಸುಳಿದಾಟದ ಭಾವನೆಯನ್ನು ಲಿಂಗಪೂಜೆಯಲ್ಲಿಯೂ, ಸರ್ಪ ಆರಾಧನೆಯಲ್ಲಿಯೂ ಮಾನವರು ಹೊರಪಡಿಸುತ್ತಿದ್ದರು. ಯತೋ ವಾ ನಿವರ್ತಂತೆ ಅಪ್ರಾಪ್ಯ ಮನಸಾ ಸಹ ಎಂಬುದು ಆರಾಧಕರ ಮನಸ್ಸಿನ ಗುರುಮಂತ್ರ. **Sexuality was considered an instrument of Devil. (Psychology of woman-by Helene Dentsele P. 113)**

ಹಾವಿಗೆ ಎರಡು ನಾಲಿಗೆಗಳು; ಒಂದು ಜ್ಞಾನದ್ದು, ಮತ್ತೊಂದು ಅಜ್ಞಾನದ್ದು. ಅಮೃತ ಕುಡಿದು ದೇವತೆಯಾಗಬೇಕೆಂದು ಹಾವು ಹವಣಿಸಿತ್ತು. ಅಮೃತ ಕುಡಿಯದಿದ್ದರೂ ಅಮೃತದ ಮಹತ್ವ ಅದಕ್ಕೆ ಗೊತ್ತು. ಜ್ಞಾನ ದೃಷ್ಟಿ, ಅಜ್ಞಾನ ದೃಷ್ಟಿ ಎಂದು ಅನ್ನುವದುಂಟು. ಅದನ್ನು ಬಿಟ್ಟು ಜ್ಞಾನದ ನಾಲಿಗೆ, ಅಜ್ಞಾನದ ನಾಲಿಗೆ ಅಂಬುವದು ಸಮಂಜಸವೋ ಎಂದು ಕೇಳಬಹುದು. ಜ್ಞಾನದಿಂದ ಬರುವ ಮಾತುಗಳೇ ಬೇರೆ, ಅಜ್ಞಾನದಿಂದ ಬರುವ ಮಾತುಗಳೇ ಬೇರೆ. ಈ ದೃಷ್ಟಿಯಿಂದ ಜ್ಞಾನದ ನಾಲಿಗೆ, ಅಜ್ಞಾನದ ನಾಲಿಗೆ ಎಂದು ಅನ್ನಬಹುದು. ಅಮೃತದ ಮಹತ್ವ ನೆನಪಿಗೆ ಬಂದ ಕಾಲಕ್ಕೆ ಹಾವಿನಲ್ಲಿ ಜ್ಞಾನದ ನಾಲಿಗೆಯ ಸುಳಿದಾಟ ಹೆಚ್ಚಾಗುವದು. ಇನ್ನಿತರ ಕಾಲದಲ್ಲಿ ಅಜ್ಞಾನ–ನಾಲಿಗೆಯ ಮರುಳಾಟ, ಅಜ್ಞಾನ ವಿಷ. ಅಜ್ಞಾನವಿಷಪ್ರಾಶನೆಯಿಂದಲೇ ಮಾನವನ ಅಸ್ತಿತ್ವದ ನಾಶ. ಉತ್ಪತ್ತಿಯಲ್ಲಿ ನಾಶ; ನಾಶದಲ್ಲಿ ಉತ್ಪತ್ತಿ. ಜ್ಞಾನದ ನಾಶದಲ್ಲಿಯೇ ಅಜ್ಞಾನ, ಅಜ್ಞಾನದ ನಾಶದಲ್ಲಿಯೇ ಜ್ಞಾನ. ಕೆಲವರಲ್ಲಿ ಜ್ಞಾನದ ವಿನಾಶ, ಮತ್ತೆ ಕೆಲವರಲ್ಲಿ ಅಜ್ಞಾನ ನಾಶ; ಮತ್ತೊಬ್ಬರಲ್ಲಿ ಜ್ಞಾನ ಅಜ್ಞಾನಗಳ ಬೆರಕೆ. ಈ ಮೂರು ಜೀವನಪ್ರವಾಹದ ವಾಹಿನಿಗಳು.

ಸರ್ಪಾರಾಧಕರಿಗೆ ಮುದ್ದುಗೂಸು **(My dear baby)** ಸರ್ಪ, ಯೋಗ ಮಾಡುವವರಿಗೆ ವಿಷದ ಮನೆ.

ಒಟ್ಟಾರೆ ಹೇಳಬೇಕಾದರೆ ಮಾನವನ ನೈಜಭಾವಕ್ಕೆ ಅನುಸರಿಸಿ ಮಾಡಿದ್ದೇ ನೀತಿ.

೭

ಪ್ರತಿಯೊಬ್ಬ ಮಾನವನಿಗೆ ಅಸ್ತಿತ್ವವಿರುವದೆಂದು ಅನ್ನಲಾಗುವದಿಲ್ಲ. ಬರೀ ಜೀವಿಸಿದ ಮಾತ್ರಕ್ಕೆ ಅಸ್ತಿತ್ವವಾಗಲಾರದು. ತನ್ನ ಅಸ್ತಿತ್ವದಿಂದ ಜೀವನಪ್ರವಾಹಕ್ಕೆ ಸೀದು ಕೊಡುವವರು ಕೆಲವರು. ಸರ್ವಸಾಮಾನ್ಯವಾಗಿ ಪ್ರವಾಹದಲ್ಲಿ ಸಿಲುಕಿ ಹರಿದು ಮುಣುಗಿ ಹೋಗುವವರೇ ಬಹಳ. ಪ್ರವಾಹದಲ್ಲಿ ಮುಣುಗುತ್ತೇವೆಂಬ ವಿಚಾರ ಲವಲೇಶವಾದರೂ ಅವರ ಹೃದಯದಲ್ಲಿ ತಲೆದೋರುವದಿಲ್ಲ. ಬಂದನು ಹೋದನು ಎಂಬುದಿಷ್ಟೇ ಅವರ ಜೀವನದ ಇತ್ಯರ್ಥ.

ಜೀವನದ ಅಸ್ತಿತ್ವವಿದ್ದವರು ಮಾನವತ್ವದ ಮೂರ್ತಿಯಾಗುವರು. ಅವರ ಕೃತಿಗಳ ಸೊಬಗು, ಗಂಧದ ಗಿಡವು ತನ್ನ ಸುವಾಸನೆಯನ್ನು ಬೀರಿ ತನ್ನ ಸುವಾಸನೆಯ ಅಸ್ತಿತ್ವವನ್ನು ಕಳೆದುಕೊಳ್ಳುವದಿಲ್ಲ. ಅಗ್ನಿನಾರಾಯಣನ ಜ್ವಾಲೆಯಲ್ಲಿ ಸಿಕ್ಕು ಬೂದಿಯಾದರೂ ಸುಡುವ ಕಾಲಕ್ಕೆ ಹೊರಟ ಸುವಾಸನೆಯನ್ನು ಕಂಡ ಜನರು, ಕಾಲವು ಗತಿಸಿದರೂ ಕೂಡ ಅದರ ನೆನಪಿನಿಂದಲೇ ಗಂಧದ ಸುವಾಸನೆಯ ಸೊಬಗನ್ನು ಹೇಳಿ ಆನಂದಪಡುವರು. ಇದು ಗಂಧದ ಗಿಡದ ಅಸ್ತಿತ್ವ. ಇಂತಹ ಅಸ್ತಿತ್ವದಿಂದಲೇ ಮಾನವನು ತನ್ನ ಮಾನವತ್ವವನ್ನು ತೋರಿಸಿ ಕೊಡುವನು.

'Men grow when inspired by high purposes, when contemplating vast horizons.' (Mind in the Making,-Robinson) ಎಂದು ಹೇಳಬಹುದು.

೮

ಜನ್ಮಪ್ರಾರಬ್ಧದಿಂದ ಹೇಡಿ ಯಾರೂ ಇರುವದಿಲ್ಲ. ಜೀವಿಸಬೇಕೆಂಬ ಸ್ವಾರ್ಥದಿಂದ ಎಲ್ಲರೂ ಹೇಡಿಯಾಗುವರು. ಆಶೆಯು ಸ್ವಾರ್ಥದ ಬೀಜಾಂಕುರ. ಮುಂದಿನ ಭರವಸೆಯ ಮೇಲೆ ಇರುವದೇ ಆಶೆ. ಜೀವದ ಹಂಗು ತೊರೆದ ಪುಂಡನಾದ ಮನುಷ್ಯನನ್ನು ಎದುರಿಸುವ ಧೈರ್ಯ ಜನಸಾಮಾನ್ಯರಲ್ಲಿ ಕಡಿಮೆ. ಯಾರಾದರೂ ಎದೆ ತಟ್ಟಿ ಇಂತಹ ಪುಂಡನನ್ನು ತಡವಿ ಪ್ರಾಸಗೊಳಿಸಿದರೆ

ಆತನಲ್ಲಿ ಧೈರ್ಯವಿರುವದೆಂದು ಅನ್ನುವೆವು. ತಾನು ಮಾಡತಕ್ಕ ಕಾರ್ಯದ ಗಂಭೀರತೆಯನ್ನು ತಿಳಿದು ಹಾಗೂ ತನ್ನ ಜೀವವು ಹಾಗೆ ಮಾಡಿದರೆ, ನೋವಿಗೆ ತುತ್ತಾಗುವದೆಂದು ಅರಿತುಕೊಂಡು ಕಾರ್ಯವನ್ನು ಕೈಕೊಂಡರೆ ಆತನಲ್ಲಿ ಧೈರ್ಯ ಉಂಟೆಂದು ಅನ್ನುವೆವು. ಅರಿಯದೆ ಮಾಡಿದ ಕಾರ್ಯಕ್ಕೆ ಧೈರ್ಯದ ಕಾರ್ಯವೆಂದು ಅನ್ನಲಾಗುವದಿಲ್ಲ.

ಪುಂಡನೂ ಹೇಡಿಯಾಗಬಹುದು; ಹೇಡಿಯೂ ಪುಂಡನಾಗಬಹುದು. ಜನರು ತನಗೆ ಅಂಜುವರೆಂಬ ಭಾವನೆ ಹೇಡಿಯಲ್ಲಿ ಒಡಮೂಡಿತೆಂದರೆ ಆತನು ಪುಂಡನಾಗುವನು. ನಂಜ ಮೊದಲು ಪುಂಡನಿದ್ದಿಲ್ಲ. ಆತನೂ ಒಬ್ಬ ಸಾಮಾನ್ಯ ಮನುಷ್ಯ. ಏನೋ ಒಮ್ಮೆ ಹುಂಬ ಧೈರ್ಯದಿಂದ ಪುಂಡನನ್ನು ಸಂಹಾರಮಾಡಿ ನ್ಯಾಯದ ದವಡೆಯೊಳಗಿಂದ ಕಳಚಿ ಬಿದ್ದ. ಮುಂದೆ ಆತನಲ್ಲಿ ಜನರು ತನಗೆ ಹೆದರುವರೆಂಬ ಭಾವನೆ ತಲೆದೋರಿತು. ಈ ಭಾವನೆಯ ಆಧಾರದ ಮೇಲೆ ಪುಂಡಾಟಿಕೆಯಿಂದ ಏಷ-ಆರಾಮದ ಜೀವನಕ್ರಮವನ್ನು ಸಾಗಿಸಿದನು. ಬಲವಂತನೇ ಸತ್ಯವಂತ ಎಂಬೀ ವಿಚಾರ ಆತನಲ್ಲಿ ಬೆಳೆದು ಮರವಾಯಿತು. 'Promote a rogue and he will sue you for damages, knock him down he will do you homage' ಎಂಬುದು ಅಬಾಧಿತ ಸತ್ಯದ ಮಾತು.

'ಹಾವು ಕಡಿಯದಿದ್ದರೂ ನೋಡಿದವರೆಲ್ಲರೂ ಆದನ್ನು ಕೊಲ್ಲುವರು' ಎಂಬೀ ಮನೋವೇದಿಕೆ ಮಂಜು ಇವಳದು. ನಂಜನ ದನಿ ಪ್ರಥಮತಃ ಕೇಳಿದ ಕೂಡಲೇ ಅವಳಲ್ಲಿ ಆತನ ವಿಷಯವಾಗಿ ಒಂದು ತರಹದ ಜುಗುಪ್ಸೆ, ದ್ವೇಷ, ತಿರಸ್ಕಾರ ಉಂಟಾಯಿತು. ಮಾತನಾಡುವವರ ಮುಖವನ್ನು ನಾವು ನೋಡದಿದ್ದರೂ ಅವರು ಮಾತನಾಡುವ ದನಿಯ ಮೇಲಿಂದ ಹಾಗೂ ಉಪಯೋಗಿಸುವ ಶಬ್ದಗಳ ಮೇಲಿಂದ ನಮ್ಮಲ್ಲಿ ಹಲವಾರು ಸಾರೆ ಒಂದು ತರಹದ ಭಾವನೆ ಮೂಡುವದೆಂದು ಮನೋವಿಶ್ಲೇಷಣದ ಶಾಸ್ತ್ರಜ್ಞರಾದ ಮ್ಯಾಕ್‌ಡೂಗಲ್, ವ್ಯಾಟ್‌ಸನ್ ಮೊದಲಾದವರ ಅಭಿಮತ.

ನಂಜನು ಕೆಟ್ಟವಿಷ ಎಂಬ ಭಾವನೆ ಅವಳಲ್ಲಿ ಕಟೆಯುತ್ತಿತ್ತು. ಅದಕ್ಕೆ ಸಮಯ ದೊರೆತೊಡನೆ ಆ ಭಾವನೆ ಅವಳ ಕೃತಿಯಲ್ಲಿ ಅವತರಿಸಿತು. ಗಂಡನ

ಸೇಡಿನ ಪ್ರೇಮದಿಂದ ಅವಳು ಆತನನ್ನು ಕೊಲ್ಲಲಿಲ್ಲ. ಹಾವು, ಅವನ್ನು ಕೊಲ್ಲಬೇಕು ಎಂಬ ಭಾವನೆಯೇ ಯುಕ್ತಪ್ರಸಂಗವೊದಗಿದೊಡನೆ ಕೂಡಲೇ ಕಾರ್ಯರೂಪವನ್ನು ತಾಳಿತು.

ಮಾಡಿದ್ದಕ್ಕೆ ಮಂಜು ಪಶ್ಚಾತ್ತಾಪಪಟ್ಟಿದ್ದರೆ ಹೃದಯದಲ್ಲಿಯ ಅಳುಕಿನಿಂದ ಗರ್ಭಪಾತವಾಗುತ್ತಿತ್ತು. ನಂಜನ ಕೊಲೆಯ ಕಾಲಕ್ಕೆ ಅವಳು ಮೂರು ಇಲ್ಲವೆ ನಾಲ್ಕು ತಿಂಗಳ ಬಸಿರು. ಪಿಂಡ ಇನ್ನೂ ತನ್ನ ಅಸ್ತಿತ್ವವನ್ನು ಧಾರಣ ಮಾಡಿದ್ದಿಲ್ಲ. ಅಸ್ತಿತ್ವ ಧಾರಣ ಮಾಡಿದ ಮೇಲೆ ತಾಯಿಯ ದೇಹದ ಮೇಲಾಗಲೀ ಇಲ್ಲವೆ ಮನಸ್ಸಿನ ಮೇಲಾಗಲೀ ಏನಾದರೂ ಆಘಾತವಾದರೆ ಪಿಂಡವು ತನ್ನ ಅಸ್ತಿತ್ವ ಉಳಿಸಿಕೊಳ್ಳಲು ಹೆಣಗುವದು. ಅದಕ್ಕೂ ಮೊದಲು ಅಂದರೆ ಅಸ್ತಿತ್ವ ಧಾರಣಮಾಡುವ ಮುಂಚೆಯೇ ಮನೋಘಾತವಾದರೆ ಪಿಂಡವು ಹೊರಬಿದ್ದು ಬರುವದು. ಇದು ಮಂಜುವಿನ ವಿಷಯದಲ್ಲಿ ಆಗಲಿಲ್ಲ.

ನಂಜ ದುಷ್ಟನು, ಕ್ರೂರನು ಎಂಬುವದನ್ನು ಮಂಜು ಅರಿತುಕೊಂಡಿದ್ದಳು. ಅವಳ ಮಾನಸಿಕ ಶಕ್ತಿಯು ನಂಜನ ಕೊಲೆಯಲ್ಲಿ ಪರಿಣಮಿಸಿತು. ಇದೊಂದು ಜೀವನಪ್ರವಾಹದ ಝರಿ.

× × × ×

ನನ್ನ ಮನೋವೇದಿಕೆಯನ್ನು ಮಂಡಿಸಿದ್ದಾಯಿತು.

ಕೊನೆಗೆ ಹೇಳುವದೇನಂದರೆ: 'It is not men in general who think or even isolated individuals who do the thinking, but men in certain groups who have developed a particular style of thought in an endless series of responses to certain typical situations.' (Soviet Literature to-day—George Reavey).

ನನ್ನ ಧ್ಯೇಯವು ಕತೆ ಹೇಳುವದಲ್ಲ. ನಿಮ್ಮ ಸುಪ್ತ ಭಾವನೆಗಳನು ಎಬ್ಬಿಸುವ ಮನದಿಂಗಿತವು ನನ್ನದಲ್ಲ. ಸಂಗತಿಗಳಲ್ಲಿ ಹುದುಗಿಕೊಂಡಿದ್ದ ಮಾನವತ್ವದ ರೂಪರೇಷೆಗಳನ್ನು ಕಂಡುಹಿಡಿಯಲು ನಿಮ್ಮ ವಿಚಾರಕ್ಕೆ ಪ್ರಚೋದನೆ ಕೊಡುವದೇ ನನ್ನ ಧ್ಯೇಯ, ನಿಮ್ಮ ವಿಚಾರ ಹೊಗೆಯಾಗ ಬಾರದು; ನಗೆಯಾಗಬಾರದು ಎಂಬುದಿಷ್ಟೇ ನನ್ನ ಆಶೆ.

ಖರಸಂವತ್ಸರ
ಮಹಾನವಮಿ
೮-೧೦-೧೯೫೧

ರಮಾಕಾಂತ

---

## ಪರಿವಿಡಿ



---

# ಜೀವನದ ಕುಡಿ

ಮತಿಗೆಟ್ಟು ಮಿತಿಯಿಲ್ಲದ ಮಾನವನಿಗೆ ಹೆದರಿಸುವಂತೆ ಭೋರೆಂದು ಬೀಸುವ ಬಿರುಗಾಳಿ. ಹುಣ್ಣಿಮೆಯಿದ್ದರೂ ಗಜಾಕಾರದ ಮೋಡಗಳಿಂದ ಚಂದ್ರನು ಮುಚ್ಚಿಹೋಗಿದ್ದನು. ಇಂದಿನ ಕತ್ತಲೆ ಅಮಾವಾಸ್ಯೆಯ ಕತ್ತಲೆಯನ್ನು ಮರೆಯಿಸುವಂತೆ ಇತ್ತು. ಬಿರುಗಾಳಿಯ ವೇಗಕ್ಕೆ ಮೋಡಗಳು ತಾಕಲಾಡಿ ಮಾಡುವ ಗುಡುಗಿನ ಆರ್ಭಟವು ಅಟಂ ಬಾಂಬಿನ ಸಪ್ಪಳಕ್ಕಿಂತ ಸಾವಿರಾರು ಪಟ್ಟು ಮಿಗಿಲಾಗಿತ್ತು. ಮಿಂಚಿದರೆ ಕಾಣಿಸುವದು, ಇಲ್ಲವಾದರೆ ಬರೀ ಕಾರ್ಗತ್ತಲೆಯ ಮುಸುಕು. ಮಳೆಗಿಂತ ಗುಡುಗು ಮಿಂಚಿನ ಸುಳಿದಾಟವೇ ಹೆಚ್ಚಾಗಿತ್ತು. ನಾಲ್ಕಾರು ಕಡೆಗೆ ಸಿಡಿಲು ಬಿದ್ದರೂ ಬಿದ್ದಿರಬಹುದು. ಗುಡುಗು ಸಿಡಿಲುಗಳ ಸಪ್ಪಳಕ್ಕೆ ನಿದ್ರೆಹೋದ ಜನರು ಹೌಹಾರಿ ಎಚ್ಚತ್ತು ಪ್ರಳಯ ಬಂದಿತೆಂದು ಕುಳಿತಿದ್ದರು.

ರಾತ್ರಿ ಬಹಳವಾಗಿದ್ದರೂ ಪಾರು ಮಾತ್ರ ಇನ್ನೂ ತನ್ನ ಹರಕು ಚಾಪೆಯ ಮೇಲೆ ಹೊರಳಾಡುತ್ತ ಮಗ್ಗುಲಲ್ಲಿ ಮಲಗಿಕೊಂಡ ಮೂರು ವರ್ಷದ ಮುರಲೀಧರನ ಮೊಗವನ್ನು ಚಿಮಣಿಯ ದೀಪದ ಬೆಳಕಿನಲ್ಲಿ ನೋಡುತ್ತಿದ್ದಳು. ಅವಳ ಕಣ್ಣೀರು ಬಾಲಕನ ಮೃದು ಕಪೋಲಗಳ ಮೇಲೆ ಬೀಳುವದನ್ನು ಪಾರು ತನ್ನ ಸಂತತಧಾರವಾಗಿ ಉರುಳುವ ಕಣ್ಣೀರುಗಳನ್ನು ಒರಸಿಕೊಳ್ಳದೆ ತಾನುಟ್ಟ ಹರಕು ಸೀರೆಯಿಂದ ಒರಸುತ್ತಿದ್ದಳು. ಮನೆಯ ಕಿಟಕಿಯಿಂದ ಮುರಲೀಧರನ ಮೇಲೆ ಮಿಂಚಿನ ಬೆಳಕು ಬೀಳುತ್ತಿದ್ದುದರಿಂದ ಆತನು ಹೆದರಿ ಎಚ್ಚತ್ತೇಳುವನೆಂದು ಪಾರು ಎದ್ದು ಕಿಟಕಿಯನ್ನು ಮುಚ್ಚಿದಳು. ಒಂದಲ್ಲ ಎರಡು ಹರಕು ಚಾದರಗಳನ್ನು ಆ ಮಗುವಿನ ಮೇಲೆ ಹೊಚ್ಚಿದಳು.

ಕೈಯಲ್ಲಿ ಚಿಮಣಿಯನ್ನು ಹಿಡಿದುಕೊಂಡು ಸುದಾಮನ ಮನೆಯನ್ನು ಮೀರುವ ತನ್ನ ಮನೆಯಲ್ಲಿ ಪಾರು ಏನೋ ಹುಡುಕಹತ್ತಿದಳು. ಕೋಣೆ

ಯಲ್ಲಿಯ ಎಲ್ಲ ಸಂದಿಗೊಂದಿಗಳನ್ನು ಹುಡುಕಿದಳು. ಮಲಗಿಕೊಳ್ಳುವದಕ್ಕಿಂತ ಮೊದಲು ಮುರಲೀಧರನು ಒಲಿಯ ಮುಂದೆ ಹಿಡಿದುಕೊಂಡು ಆಡುತ್ತ ಕುಳಿತದ್ದು ಅವಳ ಜ್ಞಾಪಕಕ್ಕೆ ಬಂದಿತು. ಅಲ್ಲಿಯೇ ಆತ ಬಿಟ್ಟಿರಬಹುದೆಂದು ತರ್ಕಿಸಿದಳು. ಹೋಗಿ ನೋಡಿದಳು. ಅಲ್ಲಿಯೂ ಇರಲಿಲ್ಲ. ಮ್ಲಾನಮೊಗವಮಾಡಿಕೊಂಡು ಹಾಸಿಗೆಯ ಮೇಲೆ ಉಸ್ಸೆಂದು ಬಂದು ಕುಳಿತುಕೊಂಡಳು. ಅವಳ ನಗೆ ಮೊಗವು ಕಂದಿತ್ತು. ವಿಶಾಲವಾದ ಹೊಳೆಯುವ ಕಣ್ಣುಗಳು ದುಃಖದ ಆವೇಗದಿಂದ ಹೊರಸೂಸಿದ ಕಣ್ಣೀರುಗಳಿಂದ ಕಳೆಗುಂದಿದ್ದವು. ನಿಡಿದಾದ ಸಂಪಿಗೆಯ ಮೂಗು ಎಡೆಯಿಲ್ಲದೆ ಬರುವ ಕಾದ ಶ್ವಾಸದಿಂದ ಹಿಗ್ಗಿತ್ತು. ಅವಳ ಮೈಬಣ್ಣ ಸ್ವಾಭಾವಿಕವಾಗಿ ಕೆಂಪು. ಈ ಕಾದ ಶ್ವಾಸದಿಂದಂತೂ ಮೊಗವು ಹೇಳಲಾರದಷ್ಟು ಕೆಂಪಾಗಿತ್ತು. ದಿನಾಲು ಅವಳ ಲಲಾಟದ ಮಧ್ಯದಲ್ಲಿ ರೂಪಕ್ಕೆ ಪುಟಕೊಡುವ ಬಟ್ಟು ಕುಂಕುಮವು ಇಂದು ಮಾಯವಾಗಿತ್ತು. ಅವಳ ಬರಿದಾದ ಹಣೆಯು ಅವಳ ಜೀವನದ ನಿರುತ್ಸಾಹವನ್ನು ತೋರಿಸುತ್ತಿತ್ತು. ಸಾವಿರಾರು ಚೇಳುಗಳ ಕಡಿತದ ವೇದನೆಯನ್ನು ಪಾಪ ತಾಳಿಕೊಳ್ಳಬಹುದಾಗಿತ್ತು. ಆದರೆ ಅವಳ ಇಂದಿನ ದುಃಖ ಜೀವನದಲ್ಲಿ ಬದುಕಿಬಾಳಬೇಕೆಂಬ ಆಶೆಯನ್ನು ಸಾವಿರ ಚೂರುಮಾಡಿಬಿಟ್ಟಿತು. ಭಯಾನಕ ವಿಚಾರಗಳು ಬಾಳುವೆಯಲ್ಲಿಯ ನಿರುತ್ಸಾಹದಿಂದ ಉಕ್ಕೇರಿದ ಸಮುದ್ರದ ತೆರೆಗಳಂತೆ ಏಳುತ್ತಿದ್ದವು. ಅವುಗಳ ಹೊಡೆತಕ್ಕೆ ವಿಚಾರ ಶೂನ್ಯಳಾಗಿ ಕುಳಿತಿದ್ದಳು. ಮುರಲೀಧರನ ಜಾವಳದ ಮೇಲೆ ಕೈಯಾಡಿಸುತ್ತ ತನ್ನ ಮುರುಕು ಮನೆಯನ್ನು ವಿಷಣ್ಣ ದೃಷ್ಟಿಯಿಂದ ನಿರೀಕ್ಷಿಸಹತ್ತಿದಳು. ತಾನು ತಂದು ಎಲ್ಲಿಟ್ಟಿರಬಹುದೆಂದು ವಿಚಾರ ಮಾಡಹತ್ತಿದಳು. ತಾನು ದಿನಾಲು ಅಡುಗೆಗೆ ಹೋಗುತ್ತಿದ್ದ ಶ್ರೀಪತಿರಾಯರ ಮನೆಯನ್ನು ಇಂದು ಸಾಯಂಕಾಲದ ನಾಲ್ಕು ಗಂಟೆಗೆ ಬಿಟ್ಟಿದ್ದು ಅವಳು ನೆನಪಿಗೆ ತಂದುಕೊಂಡಳು. ಅವರ ಮನೆ ಬಿಟ್ಟಮೇಲೆ ಜೀವನದ ಹಾಳಾದ ಬಾಳನ್ನು ಸರಿಪಡಿಸಬೇಕೆಂಬ ಇದ್ದ ಆಶೆಯು ಲಯಹೊಂದಿದ್ದರಿಂದ ಪಟ್ಟಣದ ಬೀದಿ ಬೀದಿಗಳನ್ನು ಶೂನ್ಯಮನಸ್ಕಳಾಗಿ ಮಗು ಮುರಲೀಧರನನ್ನು ಎತ್ತಿಕೊಂಡು ಅಲೆದಾಡಿದ್ದು ಸ್ಮರಣ ಪಥದಲ್ಲಿ ಬಂದಿತು. ಮುರಲೀಧರನು ಕಿರಿಕಿರಿ ಮಾಡಹತ್ತಿದ್ದರಿಂದ ಮನೆಗೆ ತಿರುಗಿ ಬರುವಾಗ

ಸಾಕಮ್ಮನವರ ಮನೆಯಲ್ಲಿ ಕುಳಿತಿದ್ದು ಲಕ್ಷ್ಯದಲ್ಲಿ ತಂದುಕೊಂಡಳು. "ಏನು ಪಾತು ಹಣೆಯ ಮೇಲಿನ ಕುಂಕುಮ ಕಾಣಿಸುವದಿಲ್ಲ" ಎಂದು ಸಾಕಮ್ಮನವರು ಅಂಜುತ್ತ ಕೇಳಿದ್ದರು.

"ಹುಚ್ಚು ನಂಬಿಗೆಯಿಂದ ಹಚ್ಚಿಕೊಳ್ಳುತ್ತಿದ್ದ ಈ ಬಟ್ಟು, ಕುಂಕುಮವೇ ನನ್ನನ್ನು ಬಸವಿಯೆಂದು ಕರೆಯಲು ಹಚ್ಚಿತು. ಮಡಿವಂತರಿಗೆ ನಾನು ನಡೆಯಿಲ್ಲದವಳಾದೆ. ಮಡಿವಂತರೆಂದು ನಾನು ತಿಳಿದುಕೊಂಡವರು ನನ್ನ ಮೇಲೆ ಕಡುಕೋಪಿಗಳಾದರು. ಮನುಷ್ಯ ಮಾನವನೆಂಬ ಭಾವನೆಯನ್ನು ಧಾರ್ಮಿಕರ ಭಾವಿಯಲ್ಲಿ ಚಕ್ಕಿದರು. ದೇವರು ನಂಬಿದರೂ ಮಾನವನು ನಂಬಲಾರನೆಂಬುದು ನನಗೆ ಮನವರಿಕೆಯಾಯಿತು. ಶ್ರೀಪತಿರಾಯರ ಮನೆಯನ್ನು ಬಿಟ್ಟು ಹೊರಬೀಳುವ ಕಾಲಕ್ಕೆ ಮನೆಯ ಯಜಮಾನತಿಯ ಎದುರಿಗೆ ಕುಂಕುಮವನ್ನು ಒರಿಸಿಕೊಂಡೇ ಹೊರಬಿದ್ದೆ. ಅವರು ಬದುಕಿದ್ದರೂ ನನ್ನ ಕುಂಕುಮ ಇನ್ನು ಮೇಲೆ ಮುಂದಿನ ಜನ್ಮಕ್ಕೆ" ಎಂದು ಪಾತು ತಾನು ಉತ್ತರ ಕೊಟ್ಟುದು ನೆನಪಿನಲ್ಲಿ ತಂದುಕೊಂಡಳು.

"ಏನಮ್ಮಾ ಪಾತು ಇಂದು ಅವರ ಮನೆಯಲ್ಲಿ ಏನಾಯಿತು. ನಿನಗೆ ಏನಂದರು ಅವರು?" ಎಂದು ಸಾಕಮ್ಮನವರು ಕಾಳಜಿಯಿಂದ ಸನ್ನಾನೋಗ ಮಾಡಿಕೊಂಡು ಕೇಳಿದ್ದರು.

"ಭೂಮಿಗೆ ನಾ ಬೇಡಾದ ಮೇಲೆ ಜನರೇನು ಮಾಡುವರು, ತಮಗೆ ಅನಿಸಿದ್ದು ಅವರೆಂದರು"

"ಏನೆಂದರು ಪಾತು. ನಿನ್ನ ಕೋಮಲ ಮನಸ್ಸನ್ನು ನೋಯಿಸಬಾರದಾಗಿತ್ತು."

"ಬಾರದಾಗಿತ್ತು. ಅವರಿಗೆ ಬೇಡಾದ ಮೇಲೆ ಮುಂದೇನು?"

"ಪಾತು ಏನಾಯಿತು ಹೇಳು"

"ಇರಲಿ ಸಾಕಮ್ಮನವರೇ ನಿಮ್ಮಲ್ಲಿ ನಾ ಒಂದು ಕೇಳಬೇಕೆಂದು ಮಾಡಿದ್ದೆ.

"ಏನು?"

"ಇಲ್ಲಾ ಒಂದು ಸ್ವಲ್ಪ ..........."

"ಏನು ಪಾತು ಕೇಳು; ಏನು ಬೇಕು ?"

"ನನಗೆ ನಿಮ್ಮಲ್ಲಿದ್ದರೆ ಒಂದು ಮೂರು ಮಾರು ಹಗ್ಗ ಬೇಕು."

"ಏನು ಹಗ್ಗ ತೆಗೆದುಕೊಂಡು ಏನು ಮಾಡುವಿ ?"

"ಬೇಕಾಗಿರುವದು. ನಾನು ಹಿಂದುಗಡೆಗೆ ತಿರುಗಿ ಕೊಡುವೆನು"

"ಅವರಲ್ಲಿ ಏನು ಅಂದರು ನನಗೆ ಮೊದಲು ಹೇಳು."

"ನಾಳೆ ಬೆಳಗಿನಲ್ಲಿ ತಪ್ಪದೆ ನಿನಗೆ ಹೇಳುವೆ ಸಾತಮ್ಮ. ನಿನ್ನ ಮುಂದೆ ನಾನು ಹೇಳದಿದ್ದರೆ ಮತ್ತ್ಯಾರ ಮುಂದೆ ನಾನು ಹೇಳಬೇಕು. ನನ್ನ ತಾಯಿ ನೀನಲ್ಲವೇ ಸಾತಮ್ಮ."

"ಹಾಗೆ ಮಾಡಬೇಡ ಪಾತು, ಅವರಲ್ಲಿ ಏನಂದರು ಹೇಳು."

"ಬೇಡ ಸಾತಮ್ಮ ನಾಳೆ ಹೇಳುವೆ. ನನಗೆ ನೀ ಮಾತ್ರ ಹಗ್ಗವನ್ನು ಕೊಡಬೇಕು."

"ಏತಕ್ಕೆ ಬೇಕು ಅದನ್ನಾದರೂ ಹೇಳು"

"ಮುರಲೀಧರ ತನ್ನ ಕೋಲುಗುದುರೆಗೆ ಬೇಕೆಂದು ಹಟಮಾಡುವನು."

"ಕುದುರೆಗೆ ಅಷ್ಟೇಕೆ ಬೇಕು ? ಬಹಳವಾದರೆ ಒಂದು ಮಾರು ಸಾಕು"

"ಅವನು ಮತ್ತೆ ಬೇಕೆಂದು ಅತ್ತರೆ ಇರಲಿ"

ಹೀಗೆ ತಾನು ಸಾತಮ್ಮನವರ ಕೂಡ ಮಾತನಾಡಿ ಅವರ ಕಡೆಯಿಂದ ಮೂರು ಮಾರು ಹಗ್ಗವನ್ನು ಇಸಕೊಂಡು ಬಂದಿದ್ದು ಅವಳ ಜ್ಞಾಪಕದಲ್ಲಿ ಬಂದಿತು. ಹಟಮಾಡಿ ಮುರಲೀಧರನು ಅದನ್ನು ತೆಗೆದುಕೊಂಡು ಕೋಲು ಕುದುರೆಗೆ ಕಟ್ಟಿದ್ದನು. ತಾನು ಮಲಗಿಕೊಳ್ಳುವ ಮುಂದೆ ಅತ ಅದನ್ನು ತನ್ನ ತಲೆಯ ಕೆಳಗೆ ಇಟ್ಟುಕೊಂಡಿದ್ದನು. ಹಾಗು ಅದನ್ನು ಹುಡುಕಿದರೆ ಸಿಗುವ ಬಗೆ ಹೇಗೆ ?

"ಸಾತಮ್ಮನವರು ಕರುಣಾಳುಗಳಲ್ಲವೇ? ಅವರು ತಮ್ಮ ಮಕ್ಕಳಿಗಿಂತ ಹೆಚ್ಚಾಗಿ ನನ್ನನ್ನು ನೋಡುವುದಿಲ್ಲವೇ? ನೀನು ಇನ್ನೂ ಹಲವುದವಳು. ಜನರ ಕಣ್ಣು ಕುಕ್ಕಿಸುವ ನಿನ್ನ ರೂಪ ಪರರ ಮನೆಯಲ್ಲಿ ಅಡಿಗೆ ಮಾಡಲು ಹೋಗುವದು ನನ್ನ ಮನಸಿಗೆ ಸರಿ ಅನಿಸುವದಿಲ್ಲ. ನಮ್ಮಲ್ಲಿಯೇ ಇದ್ದು ಕೊಂಡು ಬಿಡು. ನಮಗೂ ಮಕ್ಕಳಿಲ್ಲ ಮುಪ್ಪಿನ ಕಾಲಕ್ಕೆ ನಿನ್ನಿಂದ ನಮಗೊಂದು ಆಶ್ರಯವಾಗುವದು." ಎಂದು ಸಾತಮ್ಮನವರು ಮೇಲಿಂದ ಮೇಲೆ ಅವಳಿಗೆ ಹೇಳುತ್ತಿದ್ದುದು ಅವಳ ಸ್ಮರಣೆ ಪಟಲದಲ್ಲಿ ನೂರಾರು ಚಿತ್ರ ಗಳನ್ನು ಚಿತ್ರಿಸುತ್ತ ಸರಿದಾಡಹತ್ತಿತು.

ಪಾತು ರಾಮತೀರ್ಥದವಳು. ಅಲ್ಲಿಯ ಕರಣಿಕರ ಹೆಂಡತಿ. ಅವಳ ಯಜಮಾನನ ಹೆಸರು ಅಷ್ಟು ಜ್ಞಾಪಕಕ್ಕೆ ಬರುವದಾಗಿಲ್ಲ. ಪಾತು ಚಿಕ್ಕ ವಯಸ್ಸಿನಲ್ಲಿರುವಾಗಲೇ ಅವಳ ತಂದೆ ತಾಯಿಗಳು ತೀರಿಕೊಂಡಿದ್ದರು. ಅವಳ ದೂರದ ಯಾರೋ ನೆಂಟರು ಅವಳನ್ನು ಜೋಪಾನಮಾಡಿ ರಾಮ ತೀರ್ಥದ ಕರಣಿಕನಿಗೆ ಮದುವೆಮಾಡಿ ಕೊಟ್ಟಿದ್ದರು. ಕರಣಿಕನಾದವನೂ ಮನೆಯಿಂದ ನೆಟ್ಟಗಿದ್ದನು. ಮದುವೆಯಾಗಿ ಆರೇಳು ವರುಷಗಳಾದಮೇಲೆ ಆತನು ದುಷ್ಟರ ಸಹವಾಸದಲ್ಲಿ ಬಿದ್ದನು. ಹುಡುಗತನದಿಂದ ಆತನು ಬಹಳೇ ಅಸ್ಥಿರ ಬುದ್ಧಿಯವನಾದನು. ಹಿರಿಯರು ಮಾಡಿಟ್ಟ ಅಸ್ತಿಪಾಸ್ತಿ ಗಳನ್ನೆಲ್ಲ ಹಾಳುಮಾಡಿ ಹತ್ತೀಬಿತ್ತಿದನು. ಸಜ್ಜನನೆಂದು ಹೆಸರುವಾಸಿ ಯಾದ ಕರಣಿಕನನ್ನು ರಾಮತೀರ್ಥದವರು ಚೊಟ್ಟುಮಾಡಿ ತೋರಿಸ ಹತ್ತಿದರು. ಕಾಳುಕಡಿಗಳಿಂದ ತುಂಬಿ ತುಳುಕುತ್ತಿದ್ದ ಮನೆಯು ಶ್ರೀರಾಮ ರಕ್ಷೆಯಾಗಿತ್ತು. ದಿನ ಒಂದಕ್ಕೆ ಹೊಟ್ಟೆಯ ಚಿಂತೆ. ಪಾತು ಎಲ್ಲವನ್ನೂ ಸಹಿಸಿಕೊಂಡು ಬಾಳುವೆ ಮಾಡುತ್ತಿದ್ದಳು. ಹೀಗೆ ಜೀವನವನ್ನು ನೂಕು ತ್ತಿರುವ ಕಾಲಕ್ಕೆ ಒಂದು ದಿನ ಕರಣಿಕನು ರಾಮತೀರ್ಥದಿಂದ ಮಾಯ ವಾದನು. ಊರಲ್ಲಿಯ ಜನರು ತಮ್ಮ ಮನಬಂದಂತೆ ತರ್ಕವಿತರ್ಕ ಮಾಡಹತ್ತಿದರು. ಪಾತು ತನಗೆ ಶಕ್ಯವಿದ್ದ ಮಟ್ಟಿಗೆ ಗಂಡನ ಶೋಧವನ್ನು ಮಾಡಿದಳು. ಅವಳಿಗೆ ಅವನ ಸುಳಿವೇ ಹತ್ತಲಿಲ್ಲ. ಕಿರಿ ಕುಡಿದು ಬುದ್ಧಿ ಭ್ರಂಶನಾಗಿ ಒಂದು ಹಾಳುಭಾವಿಯಲ್ಲಿ ಬಿದ್ದು ಪ್ರಾಣಕೊಟ್ಟಿರಬಹುದೆಂದು ರಾಮತೀರ್ಥದ ಬಾದರಾಯಣಾಚಾರ್ಯರು ತಾವು ಪೂಜೆಗೆ ಹೋದ

ಪ್ರತಿಯೊಂದು ಮನೆಯಲ್ಲಿ ಈ ಸುದ್ದಿಯನ್ನು ಬೀರದೆ ಬರುತ್ತಿದ್ದಿಲ್ಲ. ಆತನ ಮಾತನ್ನು ಕೆಲವರು ನಂಬಿದರು. ಕೆಲವರು ನಂಬಲಿಲ್ಲ. ಪಾತುವಿಗೆ ಮಾತ್ರ ತನ್ನ ಗಂಡ ಬದುಕಿರುವನೆಂಬ ಭಾವನೆ. ಈ ಭಾವನೆಯಿಂದ ಅವಳು ತನ್ನ ಕುಂಕುಮದ ಬೊಟ್ಟನ್ನು ಅಳಿಸಿಕೊಂಡಿದ್ದಿಲ್ಲ. ಊರುಬಿಟ್ಟು ಹೋಗಬೇಕೆಂದು ಅವಳು ಎಷ್ಟೋ ಸಲ ವಿಚಾರಮಾಡಿದ್ದಳು. ತಾನು ಗರ್ಭಿಣಿ ಇರುವಳೆಂದು ಅವಳಿಗೆ ಅನಿಸಹತ್ತಿತು. ಆಕೆಯ ಗಂಡ ಮಾಯವಾಗಿ ಒಂದು ವರುಷದ ಮೇಲೆ ಪಾತು ಮುರಲೀಧರನನ್ನು ಹೆತ್ತಳು. ಇದನ್ನು ಕಂಡ ಮೇಲಂತೂ ಬದರೀನಾರಾಯಣಾಚಾರ್ಯರು ಮತ್ತಿಷ್ಟು ತಮ್ಮ ನಾಲಿಗೆಯನ್ನು ಚಪಲಮಾಡಿದರು. "ಆ ಹುಚ್ಚರಂಡಿ ಪಾತು ಜಾರಿಣಿ ಧಾಕೀಗೆ, ಗಂಡ ಹೋಗಿ ಒಂದು ವರುಷದ ಮೇಲೆ ಮಗನನ್ನು ಹೆತ್ತಳು. ಅವಳು ಎಂಥವಳೆಂದು ನೀವೇ ತಿಳಿದುಕೊಳ್ಳಿರಿ." ಎಂದು ಆತ ರಾಮತೀರ್ಥದಲ್ಲಿ ಮನೆಮನೆಗೂ ಪಾತುವಿನ ವಿಷಯವಾಗಿ ಪ್ರಚಾರಮಾಡಹತ್ತಿದನು.

ರಾಮತೀರ್ಥದಲ್ಲಿ ಇರುವದು ಅವಳಿಗೆ ಬಹಳೇ ಅಸಹ್ಯವೆನಿಸಹತ್ತಿತು. ತಾನು ಜಾರಿಣಿಯಲ್ಲವೆಂದು ಜನಗಳಿಗೆ ಹೇಳುವದರಿಂದ ಬರುವದೇನೆಂದು ಅವಳು ಮೌನವ್ರತವನ್ನು ತಾಳಿದ್ದಳು. ಆರು ತಿಂಗಳ ಮಗುವನ್ನು ಕಟ್ಟಿಕೊಂಡು ಜೀವನಕ್ಕೆ ಬೇಜಾರಪಟ್ಟು ರಾಮತೀರ್ಥವನ್ನು ಬಿಟ್ಟು ಈ ಊರಿಗೆ ಬಂದಿದ್ದಳು. ಎಷ್ಟೆಯೋ ಒಂದು ಕೊಂಪೆಯಲ್ಲಿ ಒಂದು ಬೀಳುಕೋಣೆಯನ್ನು ಹಿಡಿದಿದ್ದಳು. ಸೀತಮ್ಮನವರ ಪರಿಚಯದಿಂದ ಶ್ರೀಪತಿರಾಯರ ಮನೆಯಲ್ಲಿ ಅಡಿಗೆ ಮಾಡುತ್ತಿದ್ದಳು. ಅವರು ಊಟಹಾಕಿ ತಿಂಗಳೊಂದಕ್ಕೆ ಹದಿನೈದು ರೂಪಾಯಿ ಕೊಡುತ್ತಿದ್ದರು. ಮುರಲೀಧರನನ್ನು ಕಲಿಸಿ ಬುದ್ಧಿವಂತನನ್ನಾಗಿ ಮಾಡಬೇಕೆಂಬ ಅವಳ ಪ್ರಬಲ ಇಚ್ಛೆ. ಹಾಗೂ ಆಗ ಶ್ರೀಪತಿರಾಯರ ಮನೆಯಲ್ಲ ಬಾಯಿಯವರು ಪಾತುವಿನ ಪಿತಗೋತ್ರಗಳನ್ನು ಕೇಳಿದ್ದರು. ತನ್ನ ಗಂಡನು ಬಡತನದ ಒಳಲೆಯ ಮೂಲಕ ಸೈನ್ಯದಲ್ಲಿ ಸೇರಿರುವನೆಂದೂ, ತಾನು ಈ ಊರಿಗೆ ಬರುವವರೆಗೆ ಆತನು ತಿಂಗಳೊಂದಕ್ಕೆ ಯಾವದೋ ಒಂದು ಊರಿನಿಂದ ಇಪ್ಪತ್ತು ರೂಪಾಯಿಗಳನ್ನು ಕಳಿಸುತ್ತಿದ್ದನೆಂದೂ ಪಾತೂ ಬಾಯಿಯ ಕಟಬಾಯಿ ಮುಚ್ಚುವ ಹಾಗೆ ಹೇಳ

ಸಮಾಧಾನ ಮಾಡಿದ್ದಳು. ಪರರ ದುಃಖಕ್ಕೆ ಕಿವಿ ಕೇಳು ಹಾಕುವ ಜನರೇ ಬಹಳ. ದುಃಖದಲ್ಲಿ ಸಹಭಾಗಿಗಳಾಗುವದಂತೂ ದೂರ ಉಳಿಯಿತು. ಬಾಯಿಯು ಮಾತ್ರ ಮೇಲಿಂದ ಮೇಲೆ ವಷಟ್ಕಾರವನ್ನು ಪಠಿಸುತ್ತಿದ್ದಳು. ಅವಳಿಗೆ ಹೋಗಲಾರದ ದೇಶವಿಲ್ಲದ್ದರಿಂದ ಅವನ್ನು ನುಂಗಿಕೊಂಡು ಕಾಲಕ್ಷೇಪ ಮಾಡುತ್ತಿದ್ದಳು.

ಹೀಗೆ ಅವಳು ಶ್ರೀಪತಿರಾಯರ ಮನೆಯಲ್ಲಿ ಹನ್ನೆರಡು ವರುಷ ಕಾಲಕಳೆದಳು. ರಾಯರಿಗೆ ಮಕ್ಕಳಿಲ್ಲದ್ದರಿಂದ ಮುರಳೀಧರನ ಮೇಲೆ ಹೆಚ್ಚು ಮಮತೆ ಅವರದು. ಆತನೆಂದರೆ ಬಿದ್ದು ಸಾಯುತ್ತಿದ್ದರು. ಆತನ ಮುದ್ದು ಮೊಗವನ್ನು ಲಟಲಟನೆ ಮುದ್ದಿಡುತ್ತಿದ್ದರು. ಇದು ಬಾಯಿಯವರಿಗೆ ಸಹನೆಯಾಗುತ್ತಿರಲಿಲ್ಲ. "ಬೀದಿಯ ನಾಯಿಗೆ ಹೀಗೆ ಮುದ್ದು ಕೊಡುವದು ನಿಮಗೆ ಸರಿಯಲ್ಲ. ಯೋಗ್ಯತೆಗೆ ಕುಂದುಬರುವದು" ಎಂದು ಅವನ ಹೆಂಡತಿ ನುಡಿದು ಮೂಗುಮುರಿಯುತ್ತಿದ್ದಳು. ಇದಕ್ಕೆ ಅವಳಿಗೆ ಅಸಹ್ಯ ಹಾಗೂ ಅಸೂಯೆ. ದೇಶದಲ್ಲಿಯ ಯಾವತ್ತೂ ಕುಳಿತ ನಿಂತ ದೇವರಿಗೆ ಆಕೆ ಹರಕೆ ಹೊತ್ತಿದ್ದರೂ ಯಾವ ದೇವರಾದರೂ ಕಣ್ಣು ತೆಗೆದು ಅವಳನ್ನು ಕೃಪಾದೃಷ್ಟಿಯಿಂದ ನೋಡಿ ಒಂದು ಮಗುವನ್ನು ದಯಪಾಲಿಸಲಿಲ್ಲ.

ರಾಮತೀರ್ಥದ ಬಾದರಾಯಣಾಚಾರ್ಯರು ಆರು ವರುಷದ ಹಿಂದೆ ಒಮ್ಮೆ ಶ್ರೀಪತಿರಾಯರ ಮನೆಯಲ್ಲಿ ತಮ್ಮ ದೇವರ ಪೂಜೆಯನ್ನು ಮಾಡಿ 'ಬಾಯಿಯವರಿಗೆ' ಒಂದು ಅಭಿಮಂತ್ರಿಸಿದ ಯಂತ್ರವನ್ನು ಮಾಡಿ ಕೊಟ್ಟಿದ್ದರು. ಮಕ್ಕಳಾಗುವವೆಂದು ಅಭಯವಚನವನ್ನು ಕೊಟ್ಟಿದ್ದರು. ಬಾದ ಆಚಾರ್ಯರ ಮೇಲೆ ಬಾಯಿಯವರ ತುಂಬಾ ವಿಶ್ವಾಸ. ಈ ಆಚಾರ್ಯರಿಗೆ ರಾಮತೀರ್ಥದಲ್ಲಿ ಎಲ್ಲರೂ ಬಾದ—ಆಚಾರ್ಯರೆಂದು ಕರೆಯುತ್ತಿದ್ದರು. ಏಕೆ ಕರೆಯುತ್ತಿದ್ದರೆಂಬುದನ್ನು ದೇವರೇ ಬಲ್ಲ. ಆರು ವರುಷದ ನಂತರ ಬಾದ ಆಚಾರ್ಯರ ಪಾದಧೂಳಿಯು ಶ್ರೀಪತಿರಾಯರ ಮನೆಯಲ್ಲಿ ಬಿದ್ದಿತು. ಬಾಯಿಯವರಿಗೆ ಇದು ಸ್ವರ್ಗ ನಾಲ್ಕೇ ಬಟ್ಟು. ತಮ್ಮ ಯಂತ್ರದಿಂದ ಏನೂ ಫಲ ಸಿಗಲಿಲ್ಲೆಂದು ಅವನೆದುರಿಗೆ ಗೋಳಿಟ್ಟಳು.

ಆಚಾರ್ಯರು ಬಂದ ಕಾಲಕ್ಕೆ ಪಾತು ಅಡಿಗೆಯ ಮನೆಯಲ್ಲಿದ್ದಳು. ತನ್ನ ಕೆಲಸದಲ್ಲಿ ತೊಡಗಿದ್ದರಿಂದ ಹೊರಗೆ ಯಾರು ಬಂದಿರಬಹುದೆಂಬುವದು ಕೂಡ ಅವಳಿಗೆ ಅರಿವು ಇದ್ದಿರಲಿಲ್ಲ. ಆಚಾರ್ಯರ ತೀರ್ಥಪ್ರಸಾದ ಊಟ ಬಿಟ್ಟು ಹೋಗುವವರೆಗೆ ರಾಯರ ಮನೆಯಲ್ಲಿಯೇ.

ರಾಯರು ಇಂದು ದೊಡ್ಡ ಆಚಾರ್ಯರು ಬಂದಿರುವರೆಂದು ಪಾತು ವಿಗೆ ಹೂರಣಕ್ಕೆ ಹಾಕಿ ಮಸಾಲೆಯ ಕಡುಬು ಮಾಡಬೇಕೆಂದು ಹೇಳಿದ್ದರು. ಪಾತು ಇಂದು ಮುರಳೀಧರನನ್ನು ಬರುವ ಮುಂದೆ ಸಾತವ್ವನವರ ಮನೆಯಲ್ಲಿ ಬಿಟ್ಟು ಬಂದಿದ್ದಳು. ಅಡಿಗೆಯಾಯಿತು. ಬಂದ ಆಚಾರ್ಯರ ದೇವರ ಪೂಜೆಯೂ ಮುಗಿಯಿತು. ದೇವರನ್ನು ಭುಜಂಗಿಸಿದರು. ಎಲೆಯ ಮೇಲೆ ಬಂದು ಕುಳಿತುಕೊಂಡರು. ಬದಿಯಲ್ಲಿ ರಾಯರೂ ಕುಳಿತರು 'ಮುರಳೀಧರ ಕಾಣಿಸುವದಿಲ್ಲ ಊಟಕ್ಕೆ' ಎಂದು ರಾಯರು ಅಂಜುತ್ತ ಕೇಳಿದರು.

'ನಿಮ್ಮ ಮಗನೋ?' ಎಂದು ಆಚಾರ್ಯರು ಹೆಮ್ಮೆಯಿಂದ ಕೇಳಿದರು. ಎದುರಿಗೆ ನಿಂತ ಬಾಯಿಯವರು 'ಇನ್ನೂ ಮಕ್ಕಳು ಹುಟ್ಟಿಲ್ಲವೆಂದು ನಿಮಗೆ ಆಗ ತಾನೇ ನಾನು ಹೇಳಲಿಲ್ಲವೇ?' ಎಂದು ಆಶ್ಚರ್ಯದಿಂದ ನುಡಿದರು.

'ಇಲ್ಲ. ರಾಯರು ಆಸ್ಥೆಯಿಂದ ಕೇಳಿದರು. ಅದಕ್ಕೆ ನಾ ಅಂದೆ' ಎಂದು ಬಂದ ಆಚಾರ್ಯರು ಮುಗುಳು ನಗೆಯಿಂದ ನಗುತ್ತ ನುಡಿದರು.

'ಅದು ನಮ್ಮ ಅಡಿಗೆಯ ಪಾತುವಿನ ಮಗ' ಎಂದು ಬಾಯಿಯವರು ಅಂದರು.

'ಯಾವ ಪಾತು? ನಮ್ಮೂರ ಕರಣಿಕನ ಹೆಂಡತಿಯೇನು?'

'ಯಾವ ಪಾತು ಗೀತು ನನಗೆ ಗೊತ್ತಿಲ್ಲ.'

'ಅಂದರೆ ಹೆಸರು ದೆಸೆಯನ್ನು ಕೇಳದೆ ನಿಮ್ಮಲ್ಲಿ ಇಟ್ಟುಕೊಂಡಿರುವಿರೋ?'

'ಏನು ನೀನು ಯಾವ ಊರವಳೇ!' ಎಂದು ಬಾಯಿಯವರು ಸಿಟ್ಟಿನಿಂದ ಒಳಗಿದ್ದ ಪಾತುವಿಗೆ ಕೇಳಿದರು.

'ಅವಳು ರಾಮತೀರ್ಥದವಳೆಂದು ಹೇಳದುವಳಲ್ಲ.' ಎಂದು ಶ್ರೀಪತಿ ರಾಯರು ನುಡಿದರು.

'ಅವಳ ವಿಷಯಕ್ಕೆ ನಾನು ಮಾತನಾಡುವವನಲ್ಲ ಕಳ್ಳಿ. ನಡುವೆ ಇವರು ತಮ್ಮ ಉತ್ತರವನ್ನು ಇಟ್ಟೇ ಇಡುವರು.'

"ಆ ಒಯ್ಯಾರಿ ನಿಮ್ಮಲ್ಲಿ ಬಂದಳು ಹೇಗೆ' ಎಂದು ಟೊಂಕದಲ್ಲಿಯ ನಾಶೀಪುಡಿಯ ಡಬ್ಬಿಯನ್ನು ತೆಗೆದು ನಾಶಿ ಏರಿಸುತ್ತ ಬಾದ-ಆಚಾರ್ಯರು ನುಡಿದರು

"ಆಚಾರ್ಯರೇ ಅವಳು ಒಯ್ಯಾರಿ ಇರಲಿ ಗಿಯ್ಯಾರಿ ಇರಲಿ. ಊಟದ ಕಾಲಕ್ಕೆ ತಗೆದುಕೊಂಡು ಏನು ಮಾಡುವದು. ಊಟ ಮುಗಿಯಲಿ ಮೊದಲು ಬಡಿಸ ಬಾ." ಎಂದು ಶ್ರೀಪತಿರಾಯರು ಅಂದರು.

'ನಮ್ಮೂರ ಕರಣಿಕನ ಹೆಂಡತಿಯಾಗಿದ್ದರೆ ನಾನು ಊಟ ಮಾಡುವ ದಿಲ್ಲ' ಎಂದು ಆಚಾರ್ಯರು ಜಂತೆಯನ್ನು ಎಣಿಸುತ್ತ ನುಡಿದರು.

'ಏಕೆ?' ಎಂದು ಬಾಯಿಯವರು ಗಾಬರಿಯಾಗಿ ಕೇಳಿದರು.

'ಅವಳು ಜಾರಿಣಿ, ಢಾಕಿಣಿ, ಪಿಶಾಚಿನಿ, ಎಲ್ಲವೂ ಅಬ್ರಹ್ಮಣ್ಯಮಯ ಅವಳ ವಿಷಯ. ಅವಳ ಕೈಯಿಂದ ಊಟ ಮಾಡುವ ಬಗೆ ಹೇಗೆ? ಗಂಡ ತೀರಿಕೊಂಡರೂ ಕುಂಕುಮವನ್ನು ಹಚ್ಚಿಕೊಂಡು ಬಿಂಕದ ಒಯ್ಯಾರಿ ಯಾಗಿ ನಟಿಸುವಳು. ಗಂಡ ಸತ್ತು ಒಂದು ವರುಷದ ಮೇಲೆ ಅವಳು ಒಂದು ಗಂಡು ಮಗುವನ್ನು ಹೆತ್ತಳು.' ಎಂದು ಆಚಾರ್ಯರು ಅಧಿಕಾರ ವಾಣಿಯಿಂದ ನುಡಿದರು.

ಒಳಗಿದ್ದ ಪಾತು ಇದನ್ನೆಲ್ಲ ಕೇಳುತ್ತಿದ್ದಳು. ಮೈ ಬೆವರಿತು. ಚಕ್ರ ಬಂದಿತು ಕಣ್ಣಿಗೆ. ಬಡಿಸಬೇಕೆಂದು ಕೈಯಲ್ಲಿ ಪಾತ್ರೆ ಹಿಡಿದುಕೊಂಡು ಹೊರಟಿದ್ದಳು. ಅಡಿಗೆಯ ಮನೆಯಲ್ಲಿಯೇ ದಿಗ್ಭ್ರಾಂತಳಾಗಿ ಕುಳಿತು ಕೊಂಡಳು.

'ಹೊರಗೆ ಬಾ ಪಾತು, ನೀನು ಯಾವ ಪಾತು ನೋಡುವಾ?' ಎಂದು ಬಾಯಿಯವರು ಆರ್ಭಟದಿಂದ ಗುಡುಗಿದರು.

'ಇದನ್ನು ಈ ಕಾಲಕ್ಕೆ ಕೇಳುವ ಸಮಯವಲ್ಲ. ಆಚಾರ್ಯರದೇ ಊಟ ಮುಗಿಯಲಿ, ಮುಂದೆ ನೋಡೋಣ' ಎಂದು ರಾಯರು ನುಡಿದರು.

'ಏನೇ ಹಾದರಗಿತ್ತಿ ಹೊರಗೆ ಬಾ. ಒಳಗೆ ಏಕೆ ಕುಳಿತಿರುವೆ. ಬೆಲ್ಲ ಬಡಿದ ಕಲ್ಲಿನಂತೆ' ಎಂದು ಉಪಾಧ್ಯಾಯರು ಗರ್ಜಿಸಿದರು.

ನಡುಗುತ್ತ ಪಾತು ಹೊರಗೆ ಬಂದಳು.

ಆಚಾರ್ಯರು ಅವಳನ್ನು ತೀಕ್ಷ್ಣ ದೃಷ್ಟಿಯಿಂದ ನೋಡಿದರು.

'ಇವಳೇ ನಮ್ಮೂರ ಪಾತು ಜಾರಿಣಿ' ಎಂದು ಬಂದ ಆಚಾರ್ಯರು ಕೂಗಿದರು.

'ನಾನಲ್ಲ ಜಾರಿಣಿ. ನನ್ನ ಗಂಡ ಬದುಕಿರುವನು. ಇಂದು ನಾಳೆ [illegible]ವರೂ ಬಂದೇ ಬರುವನು' ಎಂದು ನುಡಿದವಳೇ ಶ್ರೀಪತಿರಾಯರ ಮನೆಯನ್ನು ಬಿಟ್ಟು ಹೊರಹೊರಟಳು.

ರಾಯರು ಎದ್ದು ಅವಳನ್ನು ಕರೆದುಕೊಂಡು ಬರಲು ಹೋದರು. ಅವಳು ಮಿಂಚಿನಂತೆ ಎಲ್ಲಿಯೋ ಮಾಯವಾದಳು. ಇಂತಹ ಪರಿಸ್ಥಿತಿಯಲ್ಲಿ ಪಾತು ಇಂದು ತನ್ನ ತವರು ಮನೆಗೆ ಬಂದಿದ್ದಳು.

ಜಂತಿಗೆ ಕಟ್ಟಿದ ಸೀರೆಯಿಂದ ನೇಣು ಹಾಕಿಕೊಳ್ಳಬೇಕೆಂದು ಪ್ರಯತ್ನ ಮಾಡುತ್ತಿದ್ದಳು. ಕೊರಳಿಗೆ ನೇಣು ಹಾಕಿಕೊಂಡಳು. ಬೆಳಕಿನಲ್ಲಿ ಮುರಲೀಧರನ ಮೊಗವನ್ನು ನೋಡಿ ಇನ್ನೊಮ್ಮೆ ಹಾರೈಸಿ ಬಂದ ಬೇಗದಿಂದ ನೇಣು ತೆಗೆದುಕೊಂಡಳು. ಕಣ್ಣೀರು ಸುರಿಸುತ್ತಾ ಮಗುವಿನ ಬದಿಯಲ್ಲಿ ಕುಳಿತುಕೊಂಡಳು. ಮಗುವನ್ನು ತೊಡೆಯ ಮೇಲೆ ಮಲಗಿಸಿಕೊಂಡಳು. ಪ್ರತಿದಿನವೂ ಮುರಲೀಧರನನ್ನು ಶ್ರೀ ವಿಜಯದಾಸರ ಆಶೀರ್ವಾದ ಪದ್ಯದಿಂದ ಆಶೀರ್ವದಿಸುವಂತೆ ಅವಳು ತನ್ನ ದುಃಖವನ್ನು ಒಳಗೊತ್ತಿ ಕೊನೆಯ ಆಶೀರ್ವಾದವೆಂದು ಗದ್ಗದ ಕಂಠದಿಂದ ಹಾಗೂ ತನ್ಮನಸ್ಕಳಾಗಿ ಹಾಡತೊಡಗಿದಳು

ಚಿರಂಜೀವಿಯಾಗೆಲವೊ ಚಿನ್ನ ನೀನು |
ಹರಿದಾಸ ದಾಸರ ಪಾದಧೂಳಾಗಿ । ಪಲ್ಲ |.

ಜರಿಯಬೇಡ ಮರೆಯಬೇಡ ಎಂದಿಗೂ |
ತಿರಿಯಬೇಡ ಖಳರ ಮನೆಗೆ ಹೋಗಿ ||
ಮರೆಯಬೇಡ ತತ್ವ ಉಪದೇಶವಮಾಡಿದ್ದು |
ಬೆರೆಯಬೇಡನ್ಯಸತಿಯರ ಸ್ವಪ್ನದಲ್ಲೂ || ೧ ||

ಸಾಲಮಾಡಲಿಬೇಡ ಸಾಲದೊಡೆನಬೇಡ |
ನಾಳಿಗೇ ಹೇಗೆಂಬ ಚಿಂತೆಬೇಡ ||
ಖೂಳಜನರೊಡನೆ ಮಿತ್ರತ್ವ ಮಾಡಲಿಬೇಡ |
ಬಾಳುವರ ಸಂಗಡಲಿ ಬಾಳೆಲವ್ವೋ ಬಾಲ || ೨ ||

ಲೋಕವಾರ್ತೆಯು ನಿನ್ನ ಕಿವಿಗೆ ಕೇಳಸಬೇಡ |
ಶ್ರೀಕಾಂತನಾ ವಾರ್ತೆ ಕೇಳದಿರಬೇಡ ||
ಪಾಕಮಾಡಿದ್ದು ಏಕಾಂತದಲಿ ಉಣಬೇಡ |
ಲೌಕಿಕವನನುಸರಿಸಿ ದಣುಕೊಳಲಿಬೇಡ || ೩ ||

ಪಂಡಿತರು ಪಾಮರರು ಯಾರಾದರೂ ನಿನ್ನ |
ಕಂಡವರಿಗೆಲ್ಲ ಕೌತುಕ ತೋರಲಿ ||
ಹೆಂಡತಿಯು ಸೊಸೆಯು ಮೊಮ್ಮಕ್ಕಳು ಅಳಿಯಂದಿ |
ರುಂಡುಟ್ಟು ದ್ವಿಜರ ಸಹ ಗಂಡುಗಲಿ
ಯಾಗಿರಲೋ | ೪ ||

ಮಂದಮತಿಗಳ ಕೂಡ ಮಾತಾಡದಿರು ಹರಿ |
ನಿಂದಕರ ಕಣ್ಣೆತ್ತಿ ನೋಡಬೇಡಾ ||
ಇಂದಿರಾ ರಮಣ ಸಿರಿ ವಿಜಯ ವಿಠಲನ ಪದ ||
ದ್ವಂದ್ವ ಮಸ್ತಕತನರ ನೋಡದಿರಬೇಡ || ೫ ||

ಹೀಗೆ ಬಿಕ್ಕಿ ಬಿಕ್ಕಿ ಹಾಡುತ್ತ ಅವನ ಮೃದುವಾದ ಲಲಾಟದ ಮೇಲೆ ಕಣ್ಣೀರಿನಿಂದ ಆಶೀರ್ವದಿಸಿದಳು. ಮುದ್ದುಕೊಟ್ಟು, ಮೆಲ್ಲಗೆ ಮಲಗಿಸಿ ಅಲ್ಲಿಂದ ಎದ್ದಳು. ಮತ್ತೆ ನೇಣು ಹಾಕಿಕೊಳ್ಳಬೇಕೆಂದು ಹೋಗಿ ನಿಂತಳು. ದೀಪವನ್ನು ಆರಿಸಿದಳು. ಕತ್ತಲೆಯಲ್ಲಿ ಕೈಯಾಡಿಸುತ್ತಾ ತಾನು ಸೀರೆ

# ಸಣ್ಣ ಸಾಹೇಬ?

ಬೇಸಿಗೆಯ ಬಿಡುವು ಇದ್ದುದರಿಂದ ರಾಯರ ಊಟಕ್ಕೆ ಅವಸರವಿಲ್ಲವೆಂದು ನಾರ್ಝುರರ ಹೆಂಡತಿಯಾದ ಕಾಶಕ್ಕನು ತಲೆಯೊಡೆಯುವಂತಹ ಬಿಸಿಲನ್ನು ಲೆಕ್ಕಿಸದೆ ಒಂದು ಗುತ್ತ ಮೊಟ್ಟೆಯನ್ನು ಹೆಗ್ಗೇರಿಯ ಕೆರೆಯಲ್ಲಿ ಒಗೆದು ತಲೆಯ ಮೇಲಿಟ್ಟುಕೊಂಡು ಉಸ್ಸೆಂದು ಮನೆಗೆ ಬಂದಳು. ಕಾಶಕ್ಕನ ಗಂಡ ಕಾಳಪ್ಪನು ಇನ್ನೂ ಪಡಸಾಲೆಯಲ್ಲಿ ಕಾಲಿಟ್ಟಳೋ ಇಲ್ಲವೋ, ಹಸಿದ ಹುಲಿಯಂತೆ ಅರ್ಭಟಿಸುತ್ತ ಅವಳ ಮೈಮೇಲೆ ಹೋದನು. ಕಾಳಪ್ಪನ ಇಂತಹ ಸ್ವಭಾವವನ್ನು ಅವಳು ದಿನಾಲು ನೋಡುತ್ತಿದ್ದುದರಿಂದ ಹೊಸದೇನೂ ಅನಿಸಲಿಲ್ಲ ಅವಳಿಗೆ. ಹಾಗೂ ಹೆದರಿ ಗಾಬರಿಗೊಳ್ಳಲಿಲ್ಲ. ನಿದಾನವಾಗಿ ಮೊಟ್ಟೆಯನ್ನು ಕೆಳಗಿಟ್ಟು ಎಡಗೈಯ ಮುಂಗೈಯಿಂದ ಮೂಗನ್ನು ಬಲವಾಗಿ ತಿಕ್ಕಿ ಬಲಗೈಯನ್ನು ಟೊಂಕದ ಮೇಲಿಟ್ಟುಕೊಂಡು ಕಾಳಪ್ಪನನ್ನು ಪಾದದಿಂದ ನೆತ್ತಿಯ ವರೆಗೆ ಎವೆಯಿಕ್ಕದೆ ನುಂಗುವಳೋ ಏನೋ ಅನ್ನುವಂತೆ ನೋಡಿದಳು.

‘ಇಂದು ನಿಮ್ಮ ಕಚೇರಿಗೆ ಸೂಟಿ ಇಲ್ಲೇನ’ ಎಂದು ನುಡಿದಳು.

‘ಕಚೇರಿಗೆ ಸೂಟಿಯಿದ್ದರೆ ಏನಾಯಿತು ಸಾಹೇಬರು ಬರ್ತಾರಲ್ಲ.’ ಎಂದು ನಾರ್ಝುರನು ಮೆಲ್ಲಗೆ ಮಾತನಾಡಿದನು.

‘ದಿನಾ ಸಾಹೇಬರಂತ ಅಂತೀರಲ್ಲ ಎಷ್ಟು ಮಂದಿ ಇದ್ದಾರ ಸಾಹೇಬರು ? ಇಂಗ್ರೇಜೇರು ದೇಶಬಿಟ್ಟು ಹೋದರೂ ಇನ್ನೂ ಸಾಹೇಬರು ಇದ್ದಾರೇನ’ ಎಂದು ಮೊಟ್ಟೆಯನ್ನು ಜಾಡಿಸುತ್ತ ಕಾಶಕ್ಕ ಕೇಳಿದಳು.

‘ನನ್ನ ನೌಕರಿ ಇರುವತನಕಾ ಇರುವವರೇ. ಕೆಂಪು ಸಾಹೇಬರು ಹೋದರೇನಾಯಿತು ಕಾಳಾ ಸಾಹೇಬರು ಇರುವರಲ್ಲ.’

ಭೆಟ್ಟಿಯಾಗಿ ನಮಸ್ಕಾರ ಮಾಡಿಬರಬೇಕು. ಅವರ ಕುಶಲಪ್ರಶ್ನಗಳನ್ನು ಕೇಳಬೇಕು. ಬರಿಗೈಯಿಂದ ಹೋಗಬಾರದು. ಒಂದು ರೀತಿಯ ಪಲ್ಲಿಯ ಸಿಪ್ಪಡನ್ನಾದರೂ ಕೈಯಲ್ಲಿ ಹಿಡಿದುಕೊಂಡು ಹೋಗಬೇಕು. ಅದನ್ನು ಮುಂದಿಟ್ಟು ನಮಸ್ಕಾರ ಮಾಡಿ ಕುಶಲಪ್ರಶ್ನಗಳನ್ನು ಕೇಳುವವೇಳೆ ಸಾಹೇಬರಿಗೂ ಸಾಹೇಬಿಣಿಗೂ ಬೇಕಾಗುವ ಪದಾರ್ಥಗಳನ್ನು ಕೇಳಿಕೊಂಡು ಅರ್ಧ ಬೆಲೆಯನ್ನು ಕೈಯಿಂದ ಹಾಕಿ ಕಳಿಸಿಕೊಡಬೇಕು. ಸಣ್ಣ ಊರು ಇದ್ದ ಮೂಲಕ ಬಟಾಟೆ ಸಿಗುವದಿಲ್ಲ. ನಗರಕ್ಕೆ ಒಂದು ಸಲ ದೊಡ್ಡ ಪೇಟೆಯಿಂದ ಶ್ರೇಷ್ಠ ಬಟಾಟೆಗಳನ್ನು ತರಿಸಬೇಕು. ಅದು ಸೇರು ಬೆಣ್ಣೆಯನ್ನು ತರಿಸಿಕೊಡುವದಂತೂ ಸೈ — ಹೀಗೆ ಕಾಳಪ್ಪನು ಮುಂದೆ ಬರುವ ಸಾಹೇಬರ ಮರ್ಜಿಯನ್ನು ಹಿಡಿಯಬೇಕೆಂದು ನಿರ್ಧರಿಸಿದ್ದನು. ತನ್ನ ಮರ್ಜಿಯ ಸಾಧನಗಳನ್ನು ಕಾಶವ್ವನ ಎದುರಿಗೆ ವಿವರಿಸಿದ್ದನು. ಇವುಗಳನ್ನು ಪೂರೈಸಲು ಹಣವೆಲ್ಲಿಂದ ತರಬೇಕೆಂದು ಅವಳು ಕಾಳಪ್ಪನಿಗೆ ಪ್ರಶ್ನೆ ಹಾಕಿದ್ದಳು. ತನ್ನಲ್ಲಿದ್ದ ಪ್ರತಿಜ್ಞೆಯ ಮೋಹರನ್ನು ಒತ್ತಿ ತಾನು ಸಹಿ ಮಾಡುವದಕ್ಕೆ ತಗೆದುಕೊಳ್ಳುತ್ತಿದ್ದ ಕಾಲು ರೂಪಾಯಿಯನ್ನು ಅರ್ಧ ರೂಪಾಯಿಗೆ ಏರಿಸಬೇಕೆಂದು ಮಾಡಿದ್ದನು. ಕೊಡುವವರು ಗುಣುಗುಟ್ಟಿದರೆ ಎರಡು ಆಣೆಯ ಹಜಾಮನೂ ಅರ್ಧ ರೂಪಾಯಿಗಿಂತ ಹೆಚ್ಚಿಗೆ ತೆಗೆದುಕೊಳ್ಳುವನೆಂದು ಅವರಿಗೆ ಹೇಳಿ ಸಮಾಧಾನ ಮಾಡಿ ಕಳಿಸಿದರಾಯಿತು. ಈ ಉತ್ತರಕ್ಕೂ ಅವರು ಸಮಾಧಾನವಾಗದಿದ್ದರೆ, ಸುಬ್ಬಯ್ಯನ ಅಂಗಡಿಯಿಂದ ಕೆ. ಟಿ. (K. T) ಸ್ಪೆಶಲ್ ಚಹಾ ತರಿಸಿಕೊಟ್ಟರಾಯಿತು. ಈ ರೀತಿ ಕಾಳಪ್ಪನ ವಿಚಾರಸರಣಿಯಾಗಿತ್ತು.

ನಡುಮನೆಯ ಮೂಲೆಯಲ್ಲಿ ಜ್ವರದಿಂದ ಮಲಗಿಕೊಂಡ ಅವನ ಮಗನು "ಅವ್ವಾ, ಒಂದಿಷ್ಟು ಕಾಫಿ ಮಾಡಿಕೊಡತೀಯಾ? ಗಂಟಲ ಆರೇದ." ಎಂದು ಅವನು ಮೆಲ್ಲಗೆ ನುಡಿದನು. 'ಮನೆಯೊಳಗೆ ಸಕ್ಕರೀನೆ ಇಲ್ಲ. ಮೊನ್ನೆ ತಂದ ರೇಶನ್ ಸಕ್ರಿ ಆ ಬರೋ ಸಾಹೇಬರ ಮನಿಗೆ ಒಯ್ದಿಟ್ಟಾರ. ಮನೆಯೊಳಗೆ ಬೇನೆ ಬೇಸರಿಕೆಯವರು ಅಂಬುವರು ಹಿಂದು ಮುಂದೆ ವಿಚಾರ ಮಾಡದೆ ಚಕ್ಕ ಮರಿ ಒಯ್ದು ಹಾಗೆ ಒಯ್ದು ಇಟ್ಟು

ಕಾಳಪ್ಪನು ಹೇಳಲಿಕ್ಕೆ ಹಿಂಜರಿಯುತ್ತಿದ್ದಿಲ್ಲ. ಚಿತ್ರಗುಪ್ತನ Confidential Sheetಕ್ಕೆ ಕಾಳಪ್ಪ ಅಷ್ಟು ಹೆದರುತ್ತಿದ್ದಿಲ್ಲ. ಸತ್ತ ಬಳಿಕ ಅದರ ವಿಚಾರ. ಇದ್ದ ಕಾಲಕ್ಕೆ ಅದರ ಪ್ರಭಾವವೇ ತೋರಬೀಳುವದಿಲ್ಲ. ಸಾಹೇಬರು ಬರೆದಿಡುವ ಈ 'ಶೀಟ' ಅಂದರೆ ಕಾಳಪ್ಪನಿಗೆ ನಾಲ್ಕರ ಛಳಿಯು ಬರುತ್ತಿತ್ತು. ಸಟವಿಯ ಬರಹಕ್ಕಿಂತ ಅದರಲ್ಲಿಯ ಸಾಹೇಬರ ಬರಹವು ಬಹಳ ಜೋರಾಗಿರುವದೆಂದು ಆತನ ನಂಬುಗೆ. ಅದರಲ್ಲಿಯು 'Good, Sharp' 'ಗುಡ್, ಶಾರ್ಪ' ಎನ್ನುವ ಶರಾ ನವಕರಿಯಲ್ಲಿ ಮುಂದೆ ಹೆಜ್ಜೆ ಇಡಲು ಸಹಾಯಕಗಳೆಂದು ಆತನ ದೃಢವಾದ ಭಾವನೆ. ಮನುಷ್ಯನ ವಿದ್ಯೆ ಬುದ್ಧಿಗಳನ್ನು ಲಕ್ಷ್ಯಕ್ಕೆ ತೆಗೆದುಕೊಳ್ಳದೆ ಈ ಶರಾ ಹಿಡಿದು ಬಢತಿಯನ್ನು ಕೊಡುವರೆಂದು ಆತನ ಸೇವಾವೃತ್ತಿಯ ಅವಧಿಯಲ್ಲಿ ಚನ್ನಾಗಿ ಅರಿತುಕೊಂಡಿದ್ದನು.

'ರಾಯರs ಮೇಲಗಾಡಿ ವೇಳೆ ಆಯಿತು ಹೋಗೋಣ ನಡೆಯಿರಿ' ಎಂದು ಇಮಾಮ ಜೇಲೀಫನು ನುಡಿದನು.

'ನಿನಗೆ ಹಂಡಿ ಸೆಟ್ಟರ ನೋಟಾರ ತೆಗೆದುಕೊಂಡು ಬಾ ಅಂತಾ ಹೇಳಿದ್ದೆ, ತಂದೆಯೋ ಇಲ್ಲೋ' ಎಂದು ಕಾಳಪ್ಪನು ತಲೆಯಮೇಲಿನ ಟೊಪ್ಪಿಗೆಯನ್ನು ತಗೆದು ಉಟ್ಟ ಧೋತರದಿಂದ ಸೋರುವ ಬೆವರನ್ನು ಒರೆಸಿಕೊಂಡು ಟೊಪ್ಪಿಗೆಯನ್ನು ಮೂಸಿನೋಡಿ ಮಾತನಾಡಿದನು.

'ಕೇದಾರಿ ತಗೊಂಡು ಟೇಶನಿಗೆ ಹೋಗ್ಯಾನ' ಎಂದು ಇಮಾಮ ಹೇಳಿದನು.

ಕಾಳಪ್ಪನವರು ಎಲ್ಲರನ್ನೂ ಕರೆದುಕೊಂಡು ಸ್ಟೇಶನಕ್ಕೆ ಹೊರಟರು. ಸಾಸಿರಾರು ಛಿದ್ರವಿದ್ದ ಛತ್ರಿಯನ್ನು ಹಿಡಿದಿದ್ದರು. ಬಿಸಿಲಿನಲ್ಲಿ ಕಾಲನ್ನು ಎಳೆಯುತ್ತ ಸ್ಟೇಶನಕ್ಕೆ ಬಂದು ಮುಟ್ಟಿದರು. ಎಲ್ಲ ಜೇಲೀಫರಿಗೆ ಗುಂಡಿಗಳನ್ನು ಸರಿಯಾಗಿ ಹಾಕಿಕೊಳ್ಳಲು ಹೇಳಿದರು. ಆದರೆ ಕಾಳಪ್ಪನ ಅಂಗಿಗೆ ಗುಂಡಿಗಳೇ ಇದ್ದಿಲ್ಲ. ಇದನ್ನು ಕಂಡು ಮನದಲ್ಲಿ ಮಿಡುಕಿ ಹೆಂಡತಿಯನ್ನು ಚನ್ನಾಗಿ ಬಯ್ದುಕೊಂಡು ಬಿಟ್ಟ. ಆಯಿತು ಎಂದು ಅಂದುಕೊಂಡು ಗಾಡಿಯ ಹಾದಿಯನ್ನು ನೋಡುತ್ತ ನಿಂತನು. ಗಾಡಿಯು ಅರ್ಧಗಂಟೆ

ತಡವೆಂದು ಜನಗಳು ಮಾತಾಡುವದನ್ನು ಕೇಳಿದನು. ಬರಲು ತನಗೆ ತಡವಾಗುವದೆಂದು ಕಾಳಪ್ಪನು ಉಪವಾಸ ಸ್ಟೇಶನಕ್ಕೆ ಬಂದಿದ್ದನು. ನಾಲ್ಕಾರು ಗಂಟೆ ಬಿಸಿಲಿನಲ್ಲಿ ನಿಂತದ್ದರಿಂದ ಹೊಟ್ಟೆಯಲ್ಲಿ ಡೊಂಬರಾಟ ಸುರುವಾಯಿತು. ಆತನಿಗೆ ಸಹಿಸುವುದು ಆಗುತ್ತಿದ್ದಿಲ್ಲ. ಕಣ್ಣಿಗೆ ಕತ್ತಲೆ ಬರಹತ್ತಿತು. ತಿಂಡಿಯ ಅಂಗಡಿಗಾದರೂ ಹೋಗಿ ಕ್ಷುಧಾ ಶಾಂತಿ ಮಾಡಿಕೊಂಡು ಬರಬೇಕೆಂದು ಮಾಡಿದನು. ಎಲ್ಲರನ್ನು ಬಿಟ್ಟು ಹೋದರೂ ಸಂಕಟ. ಕರೆದುಕೊಂಡು ಹೋದರೂ ಸಂಕಟ. ಎಲ್ಲರಿಗೂ ಕ್ಷುಧಾಶಾಂತಿ ಭುವನಕ್ಕೆ ಕರೆದುಕೊಂಡು ಹೋಗುವಷ್ಟು ಹಣ ಆತನ ಜೇಬಿನಲ್ಲಿ ಇದ್ದಿಲ್ಲ. ಅಲ್ಲಿ ಉದ್ರಿಯನ್ನು ಹೇಳಿದರೆ ಅವರು ಕೇಳುವರೋ ಇಲ್ಲವೋ ಎಂಬ ಭೀತಿ. ಕ್ಷುಧಾಶಾಂತಿ ಭುವನಕ್ಕೆ ಹೋಗುವದನ್ನು ಬಿಟ್ಟುಕೊಟ್ಟನು. ಬಿಸಿಲಿನಲ್ಲಿ ಅಲ್ಲಿಂದ ಇಲ್ಲಿಗೆ ಇಲ್ಲಿಂದ ಅಲ್ಲಿಗೆ ಅಲೆಯಹತ್ತಿದನು. ಬೇಜಾರಪಟ್ಟು ಒಂದು ಗಿಡದ ನೆರಳಿಗೆ ಉಸ್ಸೆಂದು ಕುಳಿತುಕೊಂಡನು. ಗಾಡಿಯ ದಾರಿಯನ್ನು ನೋಡಿನೋಡಿ ಬೇಸತ್ತನು.

ಸಾಹೇಬರು ಕೆಂಪಾಗಿರುವರೋ? ಕಪ್ಪಾಗಿರುವರೋ? ಗಿಡ್ಡಾಗಿರುವರೋ? ದಪ್ಪಾಗಿರುವರೋ? ತೆಳ್ಳಗಾಗಿರುವರೋ? ಮಕ್ಕಳೆಷ್ಟು ಇರುವರು, ಹೆಂಡತಿಯು ಹೇಗೆ ಇರುವಳು, ನಾಯಿಯನ್ನು ಸಾಕಿರುವರೋ ಹೇಗೆ? ಸಾಹೇಬಿಣಿಯು ಅಂಕಿತದಲ್ಲಿ ಇರುವರೋ ಹೇಗೆ? ಎಂಬೀವಿಚಾರಗಳನ್ನು ಮಂಡಿಸಿಕೊಂಡು ಅವುಗಳ ಮೇಲೆ ತರ್ಕವಿತರ್ಕಗಳ ಮಂದಿರಗಳನ್ನು ಕಣ್ಣು ಮುಚ್ಚಿಕೊಂಡು ಕುಳಿತು ಕಟ್ಟಹತ್ತಿದನು.

ಕೈ ಬಿದ್ದಿತೆಂದು ಇಮಾಮನು ನಾರ್ಥುರ ಸಾಹೇಬರಿಗೆ ಹೇಳಿದನು. ಕಾಳಪ್ಪನ ವಿಚಾರಸರಣಿಯು ಕಡಿದು ಬಿದ್ದದ್ದರಿಂದ ಕಣ್ಣುತೆರೆದು ನೋಡಿದನು. ಬಂದಿತೋ ಗಾಡಿ ಎಂದು ಎದ್ದು ನಿಂತನು. ತನ್ನ ವೇಷವನ್ನು ಸರಿಪಡಿಸಿಕೊಂಡನು. ಎಲ್ಲ ಬೇಲೀಫರಿಗೂ ಭಯಭಕ್ತಿಯಿಂದ ನಡೆದುಕೊಳ್ಳಲು ಹೇಳಿದನು. ಸಿಪಾಯರಿಗೆ ಬಿಲ್ಲೆಯ ಪಟ್ಟಿಯನ್ನು ಧರಿಸಿ ನಿಲ್ಲಲು ಹೇಳಿದನು. "ಸಿವ್ಹಿಲ್ ಜಡ್ಜಕೋರ್ಟ ಪ್ಯೂನ" ಅಂತ ಸಿಕ್ಕೆ ಇದ್ದ ಬಿಲ್ಲೆಯನ್ನು ಚನ್ನಾಗಿ ಪಾಲಿಸ್ ಮಾಡಿರುವರೋ, ಇಲ್ಲೋ ಎಂಬುದನ್ನು

ಕಾಳಪ್ಪನು ಎಲ್ಲ ಬಿಲ್ಲಿಗಳನ್ನು ಕೈಹಿಡಿದು ನೋಡಿದನು. ಹೊಲೆಯರ ಯಮುನ್ಯಾ ಮಾತ್ರ ತನ್ನ ಬಿಲ್ಲೆಗೆ ಕುರಿಯ ಮಾಂಸದ ರಕ್ತವನ್ನು ಹಚ್ಚಿ ಕೊಂಡು ಬಂದಿದ್ದನು. ಅದನ್ನು ನೋಡಿ ನಾಯ್ಕರನು ಸಿಟ್ಟಿಗೆದ್ದು "ಎಲೋ, ಯಮುನ್ಯಾ, ಏನು ಬಿಲ್ಲಿ ಮಾಡಿಕೊಂಡು ಬಂದಿಯೋ! ಹೊಲೆಯರವ ನಾಗಿಯಲ್ಲ" ಎಂದು ಗದ್ದರಿಸಿದನು.

"ದ್ಯಾವ್ರ ನಾ ಹೊಲೇರತ ಇದ್ದೇನಿ. ತಾವು ಸಾಹೇಬರಿಗೆ ಮಾಂಸ ತಂದು ಇಟ್ಟು ಬಾ ಅಂತ ಹೇಳಿದ್ದಿರಿ ಅದನ್ನು ತಂದು ಇಟ್ಟು ಬಂದೆ. ಬಿಲ್ಲೆಗೆ ಹತ್ತಿದ್ದರೂ ಹತ್ತಿರಬಹುದು" ಎಂದು ಯಮುನ್ಯಾ ಟೊಪ್ಪಿಗೆಯನ್ನು ಸರಿಮಾಡಿಕೊಳ್ಳುತ್ತ ಉತ್ತರ ಕೊಟ್ಟನು. ಅದನ್ನು ಒರೆಸಿಕೊಂಡು ಬಾ ಹೋಗು ಎಂದು ಕಾಳಪ್ಪನು ಹೇಳಿದನು. ಯಮುನ್ಯಾ ತಲೆಯಮೇಲಿನ ಗಾಂಧಿ ಟೊಪ್ಪಿಗೆಯನ್ನು ತಗೆದು ಅದಕ್ಕೆ ಉಗುಳು ಹಚ್ಚಿ ಬಿಲ್ಲೆಯನ್ನು ತಿಕ್ಕ ಹತ್ತಿದನು.

'ಹೇಸಿ, ಇಲ್ಲಿಂದ ದೂರ ಹೋಗು' ಎಂದು ಕಾಳಪ್ಪನು ಬೆದರಿಸಿದನು.

'ಮಾಂಸಕ್ಕಿಂತ ಉಗಳು ಹೇಸಿ ಅಲ್ರಿ" ಯಮುನ್ಯಾ ಹೇಳಿ ದೂರ ಸರಿದು ಹೋದನು.

ಗಾಡಿಯ ಇಂಜನವು ಹೊಗೆಯಿಂದ ಕಾರ್ಮೋಡಗಳನ್ನು ನಿರ್ಮಿಸಿ ಅಬ್ಬರದ ಓಟದಿಂದ ನಿಲ್ದಾಣಕ್ಕೆ ಬಂದು ತಲುಪಿತು. ಸಾಹೇಬರು ಎರಡನೆ ವರ್ಗದ ಡಬ್ಬಿಯಿಂದ ಬರುವರೆಂದು ನಾಯ್ಕರ ಸಾಹೇಬರು ಎಲ್ಲರಿಗೂ ಹೇಳಿದ್ದರು. ಅವರ ದುರ್ದೈವಕ್ಕೆ ಸಾಹೇಬರನ್ನು ಯಾರೂ ನೋಡಿದ್ದಿಲ್ಲ. ಎರಡನೆಯ ವರ್ಗದ ಡಬ್ಬಿಗಳನ್ನು ಮಿಕಿ ಮಿಕಿ ಶೋಧಿಸುತ್ತ ಹೊರಟರು. ಗಾಡಿಯ ಕೊನೆಯಿಂದ ತುದಿಯವರೆಗೆ ಕಾಳಪ್ಪನು "ಸಾಹೇಬ Yes ಸರ್" ಎಂದು ಕೂಗುತ್ತ ತಿರುಗಾಡಿದನು. ಎರಡನೆಯವರ್ಗದಲ್ಲಿಯ ಪ್ರವಾಸಿ-ಕರಿಗೆ, ಬಿಲ್ಲಿಗಳು ಕಾಣಿಸುವಂತೆ ನಿಲ್ಲಿರೆಂದು ಸಿಪಾಯರಿಗೆ ಹೇಳಿದ್ದನು. ಬಿಲ್ಲಿಗಳನ್ನಾದರೂ ನೋಡಿ ಸಾಹೇಬರು ಕರೆಯಬಹುದೆಂದು ಕಾಳಪ್ಪನು ತಿಳಿದುಕೊಂಡಿದ್ದನು. ಇಂಜನದ ಹತ್ತಿರಕ್ಕೆ ಒಂದನೆಯ ವರ್ಗದ ಒಂದು

ಡಬ್ಬಿ ಇತ್ತು. ಆದರಿಂದ ಒಬ್ಬ ಸಾಹೇಬನು ಇಳಿಯ ಹತ್ತಿದನು. ಕಾಳಪ್ಪನು ದೂರದಿಂದ ಅವನನ್ನು ನೋಡಿದನು. ಸಾಹೇಬ Yes ಸರ್ ಎಂದು ಡಬ್ಬಿಕಡೆಗೆ ಓಡಹತ್ತಿದನು. ಕಾಳಪ್ಪನ ಓಟವನ್ನು ಕಂಡು ಸಿಪಾಯಿಗಳು, ಪೋಲೀಸರು ಆತನನ್ನು ಅನುಸರಿಸಿದರು. ನಿಲ್ದಾಣದಲ್ಲಿ ಹತ್ತುವ ಹಾಗೂ ಇಳಿಯುವ ಜನರು ಗಾಬರಿಯಾಗಿ ಎಲ್ಲರೂ ಕೇಕುತ್ತಾ ಓಡುವದನ್ನು ನೋಡುತ್ತ ನಿಂತರು. ಒಂದನೆಯ ವರ್ಗದ ಡಬ್ಬಿಯಿಂದ ಇಳಿಯುತ್ತಿದ್ದ ಮನುಷ್ಯನಾದರೂ ಇವನನ್ನು ಕಂಡು ಕೌತುಕದಿಂದ ನೋಡ ಹತ್ತಿದನು. ಕಾಳಪ್ಪನು ಅವನ ಹತ್ತಿರ ಭಯಭಕ್ತಿಯಿಂದ ಹೋಗಿ ನಿಂತನು. ಆವನ ಅನುಯಾಯಿಗಳೆಲ್ಲರೂ ನಮಸ್ಕರಿಸಿದರು.

'Midday Saheb sir' ಎಂದು ಕಾಳಪ್ಪನು ನುಡಿದು ತಲೆಯ ಮೇಲಿನ ಹರಕು ಟೊಪ್ಪಿಗೆಯನ್ನು ತೆಗೆದು ಬಲಗೈಯಲ್ಲಿ ಹಿಡಿದುಕೊಂಡು ತಲೆಬಗ್ಗಿಸಿ ನಮಸ್ಕಾರ ಮಾಡಿದನು. ಹೊಲೇರ ಯಮುನ್ಯಾ ನಮ್ಮ ನಾವಷ್ಟುಂದ ಸಾಹೇಬರ ಹೊಡತ್ತಿ ಚಂಡಿಕೆ ನೋಡ್ರಿ ಎಂದು ಕೂಗಿದನು. ನೆರೆದ ಜನರೆಲ್ಲರೂ ಹೊಳ್ಳಂದು ನಕ್ಕರು. ಕಾಳಪ್ಪನು ಸಿಟ್ಟಿಗೆದ್ದು ರೇಗಿದನು. ತಿರುಗಿ ಉತ್ತರ ಕೊಡಬೇಕೆಂದರೆ ಸಾಹೇಬರು ಎದುರಿಗೆ. ಸುಮ್ಮನಾದನು. ಆ ವ್ಯಕ್ತಿಯ ಎಲ್ಲ ಸಾಮಾನುಗಳನ್ನು ಕೆಳಗಿಳಿಸಲು ಡಬ್ಬಿಯಲ್ಲಿ ನಾಲ್ಕಾರು ಜನರು ನುಗ್ಗಿ ಆತನ ಎಲ್ಲ ಸಾಮಾನುಗಳನ್ನು ಕೆಳಗಿಳಿಸಿದರು.

'Refreshment Room, Tea Ready favour sir' ಎಂದು ಕಾಳಪ್ಪನು ಮುಖ್ಯಪ್ರಾಣನಂತೆ ಕೈಮುಗಿದುಕೊಂಡು ನಿಂತು ಕೇಳಿದನು.

ಇದಕ್ಕೆ ಆ ವ್ಯಕ್ತಿಯು ಉತ್ತರಕೊಡದೆ ನಗುತ್ತಾನಿಂತನು. ಜೇಬಿನಲ್ಲಿಯ ಸಿಗರೇಟು ಸೇದಹತ್ತಿದನು. 'ಸಾಹೇಬರ ಎಲ್ಲ ಸಾಮಾನುಗಳನ್ನು ಇಳಿಸಿರುವೆವು ನೋಡಿರಿ' ಅಂತಾ ಇಮಾಮು ಹೇಳಿದನು.

'ಸಾಹೇಬಿಣಿ Kiddies not come Saheb, sir' ಎಂದು ಕಾಳಪ್ಪನು ಆ ವ್ಯಕ್ತಿಗೆ ಕೇಳಿದನು.

ಆತನು ಬಾಯಿತುಂಬ ಹೊಗೆಯನ್ನು ತುಂಬಿಕೊಂಡು ಮೂಗಿನಿಂದ ಹೊಗೆಯನ್ನು ಹೊರಗೆಡವಿ ಬಳಿಗಳ ಆಕೃತಿಯನ್ನು ಮಾಡುತ್ತ ನಿಂತನು. ಇದನ್ನು ನೋಡಿ ಕಾಳಪ್ಪನು ಆಶ್ಚರ್ಯದಿಂದ ಆ ವ್ಯಕ್ತಿಯ ಮೊಗವನ್ನೇ ನೋಡುತ್ತಾ ನಿಂತನು. ಯಾರಿಗೂ ಬಾರದ ವಿದ್ಯೆಯಲ್ಲಿ ಸಾಹೇಬರು ನಿಪುಣರಿರುವರೆಂದು ಕಾಳಪ್ಪನು ಅತ್ಯಾದರದಿಂದ ಕೈಮುಗಿದುಕೊಂಡು ನಿಂತನು. ಐದಾರು ನಿಮಿಷಗಳ ಮೇಲೆ ಮತ್ತೆ "Refreshment Room tea ready' ಎಂದು ಕಾಳಪ್ಪನು ಹುಚ್ಚು ನಗೆಯನ್ನು ತೋರಿಸುತ್ತ ಮಾತ ನಾಡಿದನು. ಆ ವ್ಯಕ್ತಿಯು ಗಂಭೀರದಿಂದ "Yes, coming' ಎಂದು ಹೇಳಿದನು.

ನಾಗ್ಪುರ ಸಾಹೇಬರೇ ಮೊದಲು ಸಾಹೇಬರ ಸಾಮಾನುಗಳು ಬಂದಿ ರುವವೋ ಇಲ್ಲವೋ ನೋಡಿರಿ ನಾವು ಡೋಂಕಾರಿಪ್ಪರ ಮೋಟಾರಿನಲ್ಲಿ ಸಾಮಾನು ಒಯ್ದು ಇಡುವೆವು. ನೀವು ಹಿಂದೀ ಚಿಟ್ಟಿರ ಮೋಟಾರಿನಲ್ಲಿ ಸಾಹೇಬರನ್ನು ಕರೆದುಕೊಂಡು ಬನ್ರಿ ಎಂದು ಇಮಾಮ ಮತ್ತೆ ಹೇಳಿದನು.

ಒಂದನೆಯ ವರ್ಗದ ಡಬ್ಬಿಯಲ್ಲಿ ಕಾಳಪ್ಪನು ಹೋಗಿನೋಡಿದನು. ಅಲ್ಲಿ ಏನೂ ಸಾಮಾನುಗಳು ಇದ್ದಿಲ್ಲ. ಡಬ್ಬಿಯಿಂದ ಕೆಳಗಿಳಿದನು ಡಬ್ಬಿಯಲ್ಲಿ ಕುಳಿತವರು ' your address please ' ಎಂದು ಕೂಗಿದರು. ಕಾಳಪ್ಪನು ಕೂಗಿದವರ ಹತ್ತಿರಹೋಗಿ ನಿಂತನು ' Whose address, Sir ' ಎಂದು ಕೇಳಿದನು. ' Your Saheb's ಎಂದು ಉತ್ತರ ಕೊಟ್ಟರು. ಆ ವ್ಯಕ್ತಿಯು ತನ್ನ ವಿಳಾಸದ ಕಾರ್ಡನ್ನು ಕಾಳಪ್ಪನ ಕೈಯಲ್ಲಿ ಕೊಡಲು ಕೊಟ್ಟನು.

B. A. Giba
Empire Insurance Company, Chief Agent
Lalit Mahal 474, Bombay No 11.

ಕಾಳಪ್ಪನು ಜೇಬಿನಲ್ಲಿಯ ಕನ್ನಡಕವನ್ನು ತೆಗೆದು ತನ್ನ ಹರಕು ಧೋತರದಿಂದ ಒರಸಿ ಹಾಕಿಕೊಂಡನು. ಕೊಟ್ಟ ವಿಳಾಸದ ಕಾರ್ಡನ್ನು

' ' ಅಕ್ಷರಗಳನ್ನು ನುಂಗುವಂತೆ ನೋಡಹತ್ತಿದನು. "ಅಯ್ಯೋ ಸಾಹೇಬರಲ್ಲ Death building Company ಏಜೆಂಟನು. ಎಂದುಕೂಗಿ ಆ ವಿಳಾಸದ ಕಾರ್ಡನ್ನು ಅಲ್ಲಿಯೇ ಚಲ್ಲಿ ಬರ್ರಿ ಎಂದು ಕೂಗುತ್ತಾ ಓಡಹತ್ತಿದನು.

ಸಿಪಾಯರೂ ಬೇಲೀಫರೂ ಗಾಬರಿಯಾದರು. ಹೊಲೇರ ಯಮುನ್ಯಾ ನಾಝರರ ಹಿಂದೆ ಓಡಹತ್ತಿದನು. ಎದುರಿಗೆ 'Civil judge Court peon Drum Drum' ಎಂಬ ಬಿಲ್ಲೆಯನ್ನು ಹಾಕಿಕೊಂಡ ಸಿಪಾಯಿಯು ಬಂದನು. ಅದನ್ನು ಕಾಳಪ್ಪನು ನೋಡಿದನು. ಆ ಶಿಪಾಯಿಯು ಸಾಹೇಬರು ಬೇಸಿಗೆಯ ಸೂಟಿಯು ಮುಗಿಯುವವರೆಗೆ ಬರುವದಿಲ್ಲವೆಂದೂ ಸಣ್ಣ ಸಾಹೇಬರನ್ನು ಕಳಿಸಿಕೊಟ್ಟಿರುವರೆಂದೂ ಹೇಳಿದನು. 'ಈ ಕೋರ್ಟಿನ ನಾಝರ ನೀವೇ ಏನು ?" ಎಂದು ಅವನು ಕೇಳಿದನು. ಕಾಳಪ್ಪನ ಕಡೆಗೆ ಬೊಟ್ಟು ಮಾಡಿ ತೋರಿಸುತ್ತ ಇವರೇ ನಮ್ಮ ನಾಝರ ಸಾಹೇಬರು ಎಂದು ಯಮುನ್ಯಾ ಉತ್ತರ ಕೊಟ್ಟನು.

ನಾಝರ ಸಾಹೇಬರು ಗಾಬರಿಯಾಗಿ ಬೆವತು ನಿಂತುಬಿಟ್ಟರು. ಅವರಿಗೆ ಮಾತನಾಡಲು ನಾಲಗೆಯೇ ಏಳಲೊಲ್ಲದು. ಸಾಹೇಬರು ಎಲ್ಲಿ ಇದ್ದಾರೆ ಎಂದು ಎಲ್ಲ ಬೇಲೀಫರೂ ಸಿಪಾಯರೂ ಕಾಳಪ್ಪನ ಸುತ್ತಲೂ ನೆರೆದರು. ಸಾಹೇಬರು ಬರುವದಿಲ್ಲವಂತೆ ಸಣ್ಣ ಸಾಹೇಬರು ಬಂದಿರುವರು ಎಂದು ಕಾಳಪ್ಪನು ನಿಲ್ದಾಣದಲ್ಲಿಯ ಎಲ್ಲ ಜನರಿಗೂ ಕೇಳಿಸುವಂತೆ ಗಂಭೀರ ಧ್ವನಿಯಲ್ಲಿ ಹೇಳಿದನು.

ತಾವು ಬರುವವರೆಗೆ ಸಣ್ಣ ಸಾಹೇಬರ ಕಾಳಜಿಯನ್ನು ನೆಟ್ಟಗೆ ತಗೆದುಕೊಳ್ಳಬೇಕೆಂದು ಸಾಹೇಬರು ಹೇಳಿರುವರು ಎಂದು ಬಂದ ಸಿಪಾಯಿಯು ಹೇಳಿದನು. 'ಎಲ್ಲಿರುವರು ಸಾಹೇಬರು ?' ಎಂದು ಕಾಳಪ್ಪನು ಕೇಳಿದನು. 'ಕಡೆಯ ಡೆಬ್ಬಿಯ ಹತ್ತಿರ' ಎಂದು ಹೇಳಿ ಕರೆತರಲು ಅತನು ಹೋದನು.

ನಿಲ್ದಾಣದಲ್ಲಿಯ ಓಡಾಟದಿಂದ ಕಾಳಪ್ಪನ ಚಪ್ಪಲಿಯ ಬಾರುಗಳು ಹರಿದುಹೋಗಿದ್ದವು. ಹಾಕಿಕೊಂಡು ನಡೆಯಲು ಬರುವ ಹಾಗೆ ಇದ್ದಿಲ್ಲ. ತನ್ನ ಹರಕು ಛತ್ರಿಯಲ್ಲಿ ಹರಿದ ಎರಡೂ ಪಾದರಕ್ಷೆಗಳನ್ನು ಹಾಕಿದನು.

ಹಿಡಿಕೆಯ ಹತ್ತಿರ ಒಂದು ಧಾರವನ್ನು ಬಿಗಿದು ಛತ್ರಿಯನ್ನು ಹೆಗಲ ಮೇಲಿಟ್ಟುಕೊಂಡು ಸಣ್ಣ ಸಾಹೇಬರನ್ನು ಕಾಣಲು ಹೊರಟನು.

ಉಳಿದವರೆಲ್ಲರೂ ಸಣ್ಣ ಸಾಹೇಬರನ್ನು ಕರೆದುಕೊಂಡು ಬಂದರು. ಕಾಳಪ್ಪನು ಸಣ್ಣ ಸಾಹೇಬರನ್ನು ಕಂಡು ಆನಂದಪಟ್ಟು, ಇಂತಹವರನ್ನು ನಾನೆಂದೂ ಕಂಡಿಲ್ಲವೆಂದು ಹೇಳಿದನು. "ಕಂಡೆ ಕಂಡೆ ಸಣ್ಣ ಸಾಹೇಬ ರನು ಕಂಡೆ," ಎಂದು ಆನಂದದಿಂದ ಉಕ್ಕಿ ಮಾತನಾಡಿದನು. ಹಂದೀ ಶೆಟ್ಟರ ಮೋಟಾರಿನಲ್ಲಿ ಕೆಲವರಿಗೆ ಬರಲು ಹೇಳಿದನು. ಸಾರ್ಜಂಟ ಸಾಹೇಬರು ಮಾತ್ರ ಬಂದ ಸಿಪಾಯಿಯನ್ನು ಸಣ್ಣ ಸಾಹೇಬರನ್ನು ಕರೆದುಕೊಂಡು ಡೋಕಾರೆಪ್ಪನ ಮೋಟಾರಿನಲ್ಲಿ ಕುಳಿತರು. ಸಣ್ಣ ಸಾಹೇಬರ ವ್ಯವಸ್ಥೆ ಮಾಡಲು ಮುಂದೆ ಜನರನ್ನು ಆಗಲೇ ಕಳುಹಿಸಿದ್ದನು.

ಕಾಳಪ್ಪನವರು ಸಣ್ಣ ಸಾಹೇಬರನ್ನು ಕರೆದುಕೊಂಡು ಮನೆಗೆ ಬಂದರು. ಸೂರ್ಯನು ಮುಳುಗಲು ಇನ್ನೂ ಮೂರು ಮಾರು ಇತ್ತು. ಕಾಸವ್ವ ಅಡುಗೆ ಮಾಡಿಕೊಂಡು ಗಂಡನ ಹಾದಿಯನ್ನು ನೋಡುತ್ತ ಕುಳಿತಿದ್ದಳು. ಮಗನಿಗೆ ಊಟ ಮಾಡಲು ಎಷ್ಟೋ ಸಲ ಹೇಳಿದಳು. ಅವನು ಊಟ ಮಾಡಲಿಲ್ಲ. ಜ್ವರ ಮಾತ್ರ ಏರುತ್ತಲೇ ಇದ್ದವು. ಉರಿಯ ತಾಪದಿಂದ ಬಡಬಡಿಸುತ್ತಿದ್ದನು. ಕಾಸವ್ವನಿಗೆ ಮಾತ್ರ ಮನಸಿನಲ್ಲಿ ಶಾಂತತೆ ಇದ್ದಿಲ್ಲ. ಇದ್ದೊಬ್ಬ ಮಗನಿಗೆ ಜಡ್ಡಾಯಿತೆಂದು ಚಿಂತಿಸ ಹತ್ತಿದಳು. ಮೇಲಾಗಿ ಕೈಗೆ ಬಂದವನು. ಈ ಸಲ ಮ್ಯಾಟ್ರಿಕ್ ಪರೀಕ್ಷೆಗೆ ಕುಳಿತಿದ್ದನು. ಪಾಸಾದರೆ ಎಲ್ಲಿಯಾದರೂ ನೌಕರಿಯು ಸಿಕ್ಕು ತಮ್ಮ ಬಡತನ ಹಿಂಗಬಹುದೆಂದು ಅವಳ ಆಸೆ. ಕಾಳಪ್ಪನವರು ಮೋಟಾರಿನಿಂದ ಇಳಿಯುತ್ತಲೇ 'ಹಿಂದಿನ ಖೋಲಿ ಹಸನು ಮಾಡಿ ಏನು?' ಎಂದು ಕೇಳುತ್ತ ಮನೆ ಹೊಕ್ಕನು.

'ಸಾಹೇಬರು ಇಲ್ಲಿಗೆ ಬರುವದಿಲ್ಲವೆಂದು ನಾನು ಸ್ವಚ್ಛಮಾಡಿಲ್ಲ.' ಎಂದು ಕಾಸವ್ವನ ಉತ್ತರ.

'ಇರಲಿ ಸ್ವಚ್ಛಮಾಡಿಸುವೆ. ನೀನು ಊಟ ಮಾಡಬೇಕಾಗಿತ್ತು.' ಎಂದು ಹೇಳಿ ಕಸಬರಿಗೆಯನ್ನು ತೆಗೆದುಕೊಂಡು ಹೊರಟನು.

‘ ಇಲ್ಲ, ನಾನೇ ಮಾಡುತ್ತೇನೆ. ಆ ಕಸಬರಿಗೆಯನ್ನು ಕೊಡಿರಿ. ’

‘ ನಾನು ಸಿಪಾಯರ ಕಡೆಯಿಂದ ಸ್ವಚ್ಛ ಮಾಡಿಸುವೆ. ”

ಕಾಳಪ್ಪನು ತನ್ನ ಮನೆಯ ಹಿಂದಿನ ಕೋಣೆಯನ್ನು ಸ್ವಚ್ಛ ಮಾಡಿಸಿ, ಸಣ್ಣ ಸಾಹೇಬರನ್ನು ಅಲ್ಲಿ ಮಲಗಿಸಿ ಬಂದನು. ಯಮುನವ್ವಗ ತಂದ ಮಾಂಸವನ್ನು ಸಣ್ಣ ಸಾಹೇಬರ ಇದುರಿಗೆ ಇಟ್ಟು ಬರಲು ಹೇಳಿದನು. ಕಾಸವ್ವನು ಬರಲು ತಡವಾಯಿತೆಂದು ಕಾಳಪ್ಪನನ್ನು ಊಟಕ್ಕೆ ಕರೆಯಲು ಬಂದಳು. ನಾಯ್ಕರ ಸಾಹೇಬರು ಲಗುಬಗೆಯಿಂದ ಸಣ್ಣ ಸಾಹೇಬರ ಉಪಚಾರವನ್ನು ತೀರಿಸಿ ಊಟಕ್ಕೆ ಹೋದರು

ಕಾಳಪ್ಪನ ಮನೆಗೆ ಸಣ್ಣ ಸಾಹೇಬರು ಬಂದು ನಾಲ್ಕೈದು ದಿನಗಳಾದವು. ದಿನಾಲು ಒಂದು ಸೇರು ಮಾಂಸದ ವರಿಗೆ ಸಣ್ಣ ಸಾಹೇಬರು ಜಡಿಯುತ್ತಿದ್ದರು. ಅವರಿಗೆ ದಿನಾಲು ಬ್ರೆಡ್ಡು ತಿಂದು ಬೇಜಾರ ಬಂದಿತ್ತು. ಈ ಮಾಂಸದ ಜೊತೆಗೆ ಸ್ವಲ್ಪ ಎಲುವಿನ ತುಣುಕಿದ್ದರಂತೂ ತೀರಿತು. ಅವರ ಆನಂದಕ್ಕೆ ಪಾರವೇ ಇಲ್ಲ.

ಮಗನ ಜ್ವರವು ಎಷ್ಟು ದಿನಗಳು ಗತಿಸಿದರೂ ಕೂಡ ಇಳಿಯಲಿಲ್ಲ. ಕಾಸವ್ವ ಹೌಹಾರಿದಳು. ಡಾಕ್ಟರರನ್ನು ಕರೆದುಕೊಂಡು ಬರಲು ಗಂಡನಿಗೆ ಹೇಳಿ ಹೇಳಿ ಬೇಸತ್ತಳು. ಕಾಳಪ್ಪ ತನ್ನ ಹತ್ತರ ಹಣವಿಲ್ಲವೆಂದು ಮಿಡುಕುತ್ತಿದ್ದನು. ಸಣ್ಣ ಸಾಹೇಬರ ಸರಬರಾಯಿಯಲ್ಲಿಯೇ ಇದ್ದ ಎಲ್ಲ ಹಣ ತೀರಿ ಹೋಯಿತೆಂದು ಹೇಳಿದನು. ಪಗಾರ ಆಗುವವರೆಗೆ ತನ್ನ ಹತ್ತರ ಒಂದು ಬಿಲ್ಲಿ ಇಲ್ಲವೆಂದು ಹೇಳಿದನು. ಕಾಸವ್ವ ದೇವರ ಮೇಲೆ ಭಾರ ಹಾಕಿ ಕುಳಿತು ಬಿಟ್ಟಳು.

ದಿನಾಲು ಮಾಂಸವನ್ನು ಹೊಡೆದದ್ದರಿಂದ ಸಣ್ಣ ಸಾಹೇಬರಿಗೆ ಜಡ್ಡು ಆಯಿತು. ಕಣ್ಣು ಬೆಳ್ಳಗೆ ಮಾಡಹತ್ತಿದರು. ಕಾಲುಗಳನ್ನು ಲಟಪಟನೆ ಜಾಡಿಸಹತ್ತಿದರು. ಗೋಣನ್ನು ಚೆಲ್ಲಹತ್ತಿದರು. ಕಾಳಪ್ಪನು ಇದನ್ನು ಕಂಡು ಗಾಬರಿಯಾದನು. ಮುಂದೇನು ಮಾಡಬೇಕೆಂದು ಎದೆ ಬಡಬಡ ಕೊಂಡು ದುಃಖಿಸಹತ್ತಿದನು. ಸಣ್ಣ ಸಾಹೇಬರು ಪ್ರಾಣ ಬಿಟ್ಟರೆ ಮುಂದೆ ತನ್ನ ನೌಕರಿಯ ಗತಿಯೇನು ಎಂದು ವಿಚಾರಮಗ್ನನಾದನು.

ಡಾಕ್ಟರನನ್ನು ಕರೆಯಲು ಕಳುಹಿಸಿದ. ಡಾಕ್ಟರನು ಬಂದು ತಪಾಸಮಾಡಿದನು. (A dangerous) ಬೇನೆ ಸಾಂಸರ್ಗಿಕ' ಎಂದು ಹೇಳಿದನು. ಮನೆಯಿಂದ ಸಾಹೇಬರನ್ನು ಹೊರಗೆ ಹಾಕಿರೆಂದು ಹೇಳಿದನು. ಸಣ್ಣ ಸಾಹೇಬರನ್ನು ಹೊರಗೆ ಹೇಗೆ ಹಾಕಬೇಕು? ಸಾಹೇಬರಿಗೆ ಗೊತ್ತಾದರೆ ಬಗೆ ಹೇಗೆ? ಎಂದು ಕಾಳಪ್ಪ ವಿಚಾರ ಮಾಡಹತ್ತಿದ. ಇಮಾಮನನ್ನು ಕರೆಯಿಸಿದ. ಅಪ್ತಾಲೋಚನೆಯನ್ನು ಮಾಡಿದನು. ಸಣ್ಣಸಾಹೇಬರನ್ನು ಎಲ್ಲಿಯಾದರೂ ಕರೆದುಕೊಂಡು ಹೋಗಿ ಇಡಲು ಸಾಧ್ಯವಿರುವದೇನೆಂದು ಕೇಳಿದನು. ಇಮಾಮನು ಅವರ ಆಪ್ತಾಲೋಚನೆಯನ್ನು ಕಿವಿಯ ಮೇಲೆ ಹಾಕಿಕೊಳ್ಳಲಿಲ್ಲ. "ಇಲ್ರಿ ರಾವಸಾಹೇಬ" ಎಂದು ಹೇಳಿ ಹೊರಟು ಹೋದ. ಮುಂದೇನು ಮಾಡಬೇಕೆಂದು ಸಾರ್ಥ್ಯರ ಸಾಹೇಬರು ಪೀಕಲಾಟ ಹತ್ತಿದರು. ಏನೆ ಆಗಲಿ ದೇವರ ಮೇಲೆ ಭಾರ ಹಾಕತಕ್ಕದ್ದು, ಮನೆಯಲ್ಲಿಯೇ ಇಟ್ಟುಕೊಳ್ಳತಕ್ಕದ್ದೆಂದು ನಿರ್ಧರಿಸಿದರು.

ದಿನಾಲು ಎರಡು ಮೂರು ಸಲ ಡಾಕ್ಟರನನ್ನು ಕರೆದುಕೊಂಡು ಬಂದು ತೋರಿಸಿದರು. ಪೆನ್ಸಿಲಿನ್ ಇಂಜೆಕ್ಶನ್ ಕೊಡಿಸಿದರು. ಎಷ್ಟು ಯತ್ನ ಮಾಡಿದರೂ ಸಣ್ಣಸಾಹೇಬರ ಕಾಯಿಲೆ ವಾಸಿಯಾಗಲೊಲ್ಲದು. ಕಾಳಪ್ಪ ಸಾಲಮಾಡಿ ಒಂದುನೂರು ರೂಪಾಯಿ ವೆಚ್ಚಮಾಡಿದ. ಎಲ್ಲವೂ ನೀರಿನಲ್ಲಿ ಹೋಮ ಮಾಡಿದಂತಾಯಿತು. ಸಣ್ಣಸಾಹೇಬರಿಗೆ ಹುಚ್ಚು ಹಿಡಿದಿತ್ತು. 'ಕುಂಯಿ ಕುಂಯಿ ರಾಗವ ಮಾಡುತ್ತ' ಸಣ್ಣಸಾಹೇಬರು ನಾಲ್ಕೂ ಕಾಲುಗಳನ್ನು ಮೇಲಕ್ಕೆತ್ತಿ ಪ್ರಾಣಬಿಟ್ಟರು. ಕಾಳಪ್ಪನು 'ತನ್ನ ನೋಕರಿಯ ಗತಿ'ಯೇನೆಂದು ಕಣ್ಣೀರಿಟ್ಟ.

ಲಂಡ ಬಾಲದ ನಾಯಕರೇ ನಮ್ಮನ್ನು ಚನ್ನಾಗಿ ಉದ್ಧಾರ ಮಾಡಿದಿರಿ ಎಂದು ಕಾಳಪ್ಪನು ಉಸುರುಗರೆದನು.

ಕೂಡಲೇ ಸಾಹೇಬರಿಗೆ "Tommy, Sansaheb expired. Orders for burial awaited" ಎಂದು express ತಂತಿಯನ್ನು ಕಳುಹಿಸಿದನು.

---

# ಗೀತಾಬಲಿ

ಹೀಂಗ ಒಂದು ಊರಿತ್ತು. ಅದೇನು ದೊಡ್ಡ ಪಟ್ಟಣವೂ ಅಲ್ಲ, ಇತ್ತ ಚಿಕ್ಕ ಹಳ್ಳಿಯೂ ಅಲ್ಲ. ಮಧ್ಯಮ ತರಗತಿಯ ಊರು. ಹವಾಮಾನ ದೃಷ್ಟಿಯಿಂದ ಸುಖವಸ್ತುಗಳ ನೆಲವೀಡಾಗಿತ್ತು ಈ ಊರು. ಕರ್ನಾಟಕದಲ್ಲಿ ಜ್ಞಾನದ ಪೀಠವೆಂದು ಈ ಊರಿಗೆ ಕರೆಯುತ್ತಿದ್ದರು

ರಾಮಪಾಲನ ತಂದೆಯು ವರುಷಕ್ಕೆ ಒಂದು ಸಲವಾದರೂ ಈ ಊರಿಗೆ ತನ್ನ ಮಕ್ಕಳುಮರಿಗಳನ್ನು ಕಟ್ಟಿಕೊಂಡು ಬಂದು ನಿಧಾನ ಒಂದು ತಿಂಗಳಾದರೂ ಇದ್ದು ನೆಲೆಸುತ್ತಿದ್ದನು. ರಾಮಪಾಲನ ಅಜ್ಜ ಮುತ್ತಜ್ಜಂದಿರು ಕರ್ನಾಟಕವನ್ನು ಬಿಟ್ಟು ಪಂಚನದಿಗಳ ಪ್ರದೇಶವಾದ ಪಂಜಾಬಕ್ಕೆ ಕಂಪನಿಯ ಸರಕಾರದ ಕಾಲದಲ್ಲಿಯೇ ನವಕರಿಯನ್ನು ಹಿಡಿದುಕೊಂಡು ಹೋಗಿದ್ದರು. ಅಲ್ಲಿ ಮನೆಮಾರುಗಳನ್ನು ಅವರು ಕಟ್ಟಿಕೊಂಡಿದ್ದರೂ ಮನೆತನದವರೆಲ್ಲರೂ ತಾವು ಜನಿಸಿದ ನಾಡನ್ನು ಮರೆಯದೆ ವರುಷಕ್ಕೆ ಒಂದು ಸಲವಾದರೂ ಕಳಂಗನೂರಿಗೆ ಬಂದು ಹೋಗುವ ರೂಢಿಯನ್ನು ಇಟ್ಟುಕೊಂಡಿದ್ದರು. ಅವರು ದೂರ ದೇಶಕ್ಕೆ ಹೋದರೂ ಮನೆಯಲ್ಲಿ ಕನ್ನಡವಾಡುವ ರೂಢಿಯನ್ನೇ ಇಟ್ಟಿದ್ದರು. ಕನ್ನಡವನ್ನು ಅರಿಯದವಳು ಮನೆಗೆ ಸೊಸೆಯಾಗಿ ಬಂದರೆ ಅವಳಿಗೆ ನಾಲ್ಕಾರುತಿಂಗಳಲ್ಲಿಯೇ ತಮ್ಮ ಮನೆಯ ಭಾಷೆಯನ್ನು ಕಲಿಸುತ್ತಿದ್ದರು.

ರಾಮಪಾಲ ಪಂಜಾಬದಲ್ಲಿ ಹುಟ್ಟಿಬೆಳೆದವ. ಅವನ ಶಿಕ್ಷಣವೆಲ್ಲ ಲಾಹೋರದಲ್ಲಿ ಆಗಿತ್ತು. ೧೯೪೭ನೇ ಸಾಲಿನಲ್ಲಿ ಭಾರತ ವರುಷಕ್ಕೆ ಪ್ರಜಾಸತ್ತೆಯು ದೊರೆತ ಬಳಿಕ ಪಂಜಾಬದಲ್ಲಿ ಘಟಿಸಿದ ಅನಾಹುತಗಳ ಸಲುವಾಗಿ ತನ್ನ ಪೂರ್ವಜರು ಮಾಡಿದ ಮನೆಮಾರುಗಳನ್ನು ತೊರೆದು ಹೆಂಡರು ಮಕ್ಕಳನ್ನು ಕಟ್ಟಿಕೊಂಡು ಪ್ರಾಣ ಉಳಿಸಿಕೊಂಡು ಬರಬೇಕಾದರೆ

ಆತನಿಗೆ ಸಾಕುಬೇಕಾಯಿತು. ಮುಂಬೈ, ಆಗ್ರಾ, ದಿಲ್ಲಿ ಮೊದಲಾದ ಪಟ್ಟಣಗಳಲ್ಲಿ ಆತನಿಗೆ ನೆಲಿಸಲು ಅನುಕೂಲ ದೊರೆಯದ್ದರಿಂದ ರಾಮಪಾಲ ನೆಲಿಸಲು ಕಳಂಗನೂರಿಗೆ ಬಂದಿದ್ದನು.

ರಾಮಪಾಲ ಸುಶಿಕ್ಷಿತನು. ಒಳ್ಳೇ ಹೆಸರು ವಾಸಿಯಾದ ಚಿತ್ರಗಾರನು. ಶಾಂತಿನಿಕೇತನದಲ್ಲಿ ಪ್ರಾಚೀನ ಹಾಗೂ ಅರ್ವಾಚೀನ ಚಿತ್ರಕಲೆಯನ್ನು ಅಭ್ಯಸಿಸಲು ಮೂರು ನಾಲ್ಕು ವರುಷ ಕಳೆದಿದ್ದನು. ರಾಮಪಾಲನ ಕಲಾನೈಪುಣ್ಯವನ್ನು ಕಂಡು ಕವೀಂದ್ರರು ಬಹಳ ಪ್ರಶಂಸಿಸುತ್ತಿದ್ದರು. ನವಕರಿಯಿಂದ ಹೊಟ್ಟೆ ಹರಿದುಕೊಳ್ಳಬೇಕೆಂಬ ಆಶೆ ಆತನಿಗಿದ್ದಿಲ್ಲ. ಕಳಂಗನೂರು ಜಿಲ್ಲೆಯಾದ್ದರಿಂದ ಅಲ್ಲಿಯ ಜಿಲ್ಹಾಧಿಕಾರಿಯಾಗಿದ್ದ ಶಂಕರ ನಾಯಕರು ರಾಮಪಾಲನಿಗೆ ಮನೆ ಕಟ್ಟಿಕೊಳ್ಳಲು ಔಪಚಾರಿಕ ಬೆಲೆಯಿಂದ ಸರಕಾರದ ಸ್ವಾಮಿತ್ವವುಳ್ಳ ಭೂಮಿಯನ್ನು ಕೊಟ್ಟಿದ್ದರು. ದೇಶತ್ಯಾಗಿಯಾಗಿ ಬರುವಮುಂಚೆ ಬಚ್ಚಿಟ್ಟುಕೊಂಡು ಬಂದ ಆಪದ್ಧನವನ್ನು ವೆಚ್ಚಮಾಡಿ ಒಂದು ಮನೆಯನ್ನು ನೆಲಿಸಲು ಕಟ್ಟಿಕೊಂಡಿದ್ದನು. ದೇಶದಲ್ಲಿ ವನಮಹೋತ್ಸವದ ಹೂಲಿಯೆದ್ದ ಮೇಲೆ ಆತನ ಹೆಂಡತಿಯಾದ ಮೋಹಿನಿಯು ತಾವು ಇರತಕ್ಕ ಮನೆಗೆ 'ವನವಿಹಾರ' ವೆಂಬ ನಾಮಕರಣ ಮಾಡಬೇಕೆಂದು ಹಟತೊಟ್ಟದ್ದರಿಂದ ರಾಮಪಾಲ ತನ್ನ ಅಚ್ಚುಕಟ್ಟಾದ ಮನೆಗೆ ಅದೇ ನಾಮಾಭಿಧಾನವನ್ನೇ ಮಾಡಿದ್ದನು.

ಹೆಸರಿಗೆ ತಕ್ಕಂತೆ ಮನೆಯಿತ್ತು. ಇತ್ತ ಬಡವನ ಗುಡಿಸಲವೂ ಅಲ್ಲ; ಶ್ರೀಮಂತನ ಉಪ್ಪರಿಗೆಯೂ ಅಲ್ಲ. ಮನೆಯ ಸುತ್ತಲೂ ಗಡ್ಡೆಗೆಣಸುಗಳನ್ನು ಬೆಳೆಸುತ್ತಿದ್ದನು. ಹಾಗೂ ಮಲ್ಲಿಗೆ, ಜಾಜಿ, ಗುಲಾಬಿ ಹೂಗಳ ಕಂಟಿಗಳನ್ನು ಹಚ್ಚಿದ್ದನು. ದೂರದಿಂದ ನೋಡುವವರಿಗೆ ಮನೆಯನ್ನು ಒಳಹೊಕ್ಕು ನೋಡಬೇಕೆಂಬ ಸ್ವಾಭಾವಿಕವಾದ ಕುತೂಹಲವು ಉತ್ಪನ್ನವಾಗುತ್ತಿತ್ತು. ಮನೆಯ ಕಂಪೌಂಡಿನ ಗೇಟನ್ನು ದಾಟಿ ಒಂದು ನಿಮಿಷ ಒಳಹೊಕ್ಕರೆ ಮುಂಚಿನ ಬಾಗಿಲವು ಬರುವದು.

ಇಂದು ರಾತ್ರಿ ಎರಡು ಪ್ರಹರ ಮುಗಿದಿತ್ತು. ಮೂರು ಪ್ರಹರ ಮುಗಿಯಲು ಇನ್ನೂ ಕೆಲಕಾಲವಿತ್ತು. ಎಲ್ಲ ಕಡೆಗೂ ಶಾಂತಮಯ ವಾತಾವರಣ.

ಭಾವನೆ ಮತ್ತೆ ಕೆಲವು ಕಾಲ ದೇವರನ್ನೂ ಪಾದದಿಂದ ತುಳಿಯುವ ಭಾವನೆ, ನೈಸರ್ಗಿಕ ಶಕ್ತಿಯಲ್ಲಿ ಪೃಥಕ್ಕರಣಮಾಡಿ ಶಕ್ತಿ ಶಕ್ತಿಗಳಲ್ಲಿ ಅನುಭವಿಸುವ ಭಾವದಿಂದ ವಿರೋಧಿಸುವ ಭಾವನೆ. ಸಮಯಾಸಮಯಗಳನ್ನು ಅರಿಯದ ಪಶುತ್ವವನ್ನು ಪ್ರಾದುರ್ಭಾವ ಮಾಡುವ ಮನೋವೇದಿಕೆ, ಮನುಷ್ಯರೆಲ್ಲರೂ ರಾಕ್ಷಸರು; ರಾಕ್ಷಸರೆಲ್ಲರೂ ಮನುಷ್ಯರು; ಇವೆಲ್ಲ ರೂಪರೇಷೆಗಳನ್ನು ರಾಮಪಾಲನು ರಾವಣನಲ್ಲಿ ಒಡಮೂಡಿಸಿದ್ದನು. ಸಮಯಾಸಮಯಗಳನ್ನು ಲೆಕ್ಕಿಸದೆ ಅತೀವ ಮೇಧಾವಿ ಮನುಷ್ಯನು ಭಾವನೋದ್ರೇಕಗಳ ಪರವಶನಾಗಿ ವರ್ತಿಸಿದರೆ ಆತ ಸಮಾಜ ಕಂಟಕನಾದ ರಾಕ್ಷಸನೆಂದೇ ತೋರುವ ಭಾವನೆಯನ್ನು ರಾಮಪಾಲ ರಾವಣನ ಚಿತ್ರದಲ್ಲಿ ಒಡಮೂಡಿಸಿದ್ದನು. ಏಕಕಂಠನಾದರೂ ದಶಕಂಠನೆಂದು ನಿರೀಕ್ಷಿಸುವವರು ತಮ್ಮ ಬುದ್ಧಿಯಿಂದ ಅರಿಯಬೇಕೆಂದು ಆತ ಹೇಳುತ್ತಿದ್ದ.

ಆತನ ಹಿಂಬದಿಯನ್ಲಿಯ ತೊಟ್ಟಿಲದಲ್ಲಿ ಮಲಗಿಕೊಂಡ ಎರಡು ವರುಷದ ಶ್ಯಾಮಕಿರಣನು ಕಿರಿಚಲು ರಾಮಪಾಲನು ಚಿತ್ರಸಮಾಧಿಯಿಂದ ಎಚ್ಚತ್ತು ಹಿಂತಿರುಗಿ ಶ್ಯಾಮಕಿರಣನನ್ನು ನೋಡಿದನು. ಚಿತ್ರವೇದಿಕೆಯಿಂದ ಎದ್ದು ಶ್ಯಾಮಕಿರಣನನ್ನು ಎತ್ತಿಕೊಂಡು ಆಡಿಸುತ್ತ ತಿರುಗಾಡಹತ್ತಿದನು. ತಾನು ತೆಗೆದ ಚಿತ್ರಗಳನ್ನು ಆ ಮಗುವಿಗೆ ತೋರಿಸಿದನು. ರಂಬಿಸಲು ಎಷ್ಟೋ ಪ್ರಯತ್ನ ಮಾಡಿದನು. ಹಸಿವೆಯಾಗಿರಬಹುದೆಂದು ಆತನಿಗೆ ಅಲ್ಲಿಟ್ಟುಕೊಂಡ ಹಾಲನ್ನು ಹಾಕಹತ್ತಿದನು. ಶ್ಯಾಮಕಿರಣನಿಗೆ ರೋಹಿಣಿಯ ಮೊಲೆ ಹಾಲನ್ನುಂಡ ರೂಢಿ ಬಹಳ. ಮಗು ಗಪ್ಪಾಗಿದ್ದನ್ನು ಕಂಡು ರಾಮಪಾಲ ಏನೂ ತೋಚದೆ ತೊಟ್ಟಿಲದಲ್ಲಿ ಮಲಗಿಸಿದನು. ನಡುಮನೆಯ ಕತ್ತಲೆಯಲ್ಲಿ ಯಾರೋ ನಡೆದ ಹಾಗೆ ಅನಿಸಿದ್ದರಿಂದ 'ಯಾರು ?' ಎಂದು ಕೇಳಿದನು. ಅದಕ್ಕೆ ಉತ್ತರವೇ ಬರಲಿಲ್ಲ. ಯಾರಿರಬಹುದೆಂದು ನೋಡಬೇಕೆಂದು ಆತನಾದರೂ ಪ್ರಯತ್ನಿಸಲಿಲ್ಲ. ತೊಟ್ಟಿಲನ್ನು ಎರಡು ಮೂರು ಸಾರೆ ತೂಗಿ ದೀಪವನ್ನು ನೋಡುತ್ತ ಆಟವಾಡುತ್ತ ಮಲಗಿಕೊಳ್ಳಲೆಂದು ರಾಮಪಾಲ ತೊಟ್ಟಿಲಿನ ಹತ್ತಿರ ಎತ್ತರವಾದ ಮೇಜಿನ ಮೇಲೆ ಥಾಳವಾದ ದೀಪವನ್ನು ಇಟ್ಟು ಮತ್ತೆ

ಚಿತ್ರ ಬಿಡಿಸಲು ಕುಳಿತುಕೊಂಡಿದ್ದನು. ಶ್ಯಾಮಕಿರಣ ಅಳುವುದನ್ನು ನಿಲ್ಲಿಸಲಿಲ್ಲ. ರಾಮಪಾಲನಿಗೆ ಇತ್ತ ಚಿತ್ರ ಬರೆಯುವುದೂ ಸಾಗಲೊಲ್ಲದು; ಅತ್ತ ಮಗುವನ್ನು ರಮಿಸುವುದೂ ಆಗಲಿಲ್ಲ. ಒಮ್ಮೆ ಮಗುವನ್ನು ಎತ್ತಿಕೊಳ್ಳುವನು; ಮತ್ತೊಮ್ಮೆ ಚಿತ್ರಪಟದೆಡೆಗೆ ಕುಂಚವನ್ನು ಹಿಡಿದುಕೊಂಡು ಏನನ್ನಾದರೂ ಬರೆಯುವವನಾಗಿ ಕುಳಿತುಕೊಳ್ಳುವನು. ಮಗುವನ್ನು ಎತ್ತಿಕೊಂಡೇ ಚಿತ್ರವೇದಿಕೆಯ ಮೇಲೆ ಕುಳಿತುಕೊಂಡನು. ತೊಡೆಯ ಮೇಲೆ ಶ್ಯಾಮಕಿರಣನನ್ನು ಲಾಲಿ ಆಡಿಸಹತ್ತಿದನು. ಬಾಯಿಂದ ಲಾಲಿ ಆಡಿಸುವ ಶಬ್ದಗಳು; ವಿಚಾರದಲ್ಲಿ ಗೀತಾಂಜಲಿಯ ಕವನಗಳು. ವಿಚಾರದ ಪ್ರಾಬಲ್ಯದಿಂದ ಲಾಲಿಯ ಶಬ್ದಗಳು ಮೆಲ್ಲಗೆ ನಿಲ್ಲುತ್ತ ಕೊನೆಗೆ ವಿಚಾರವಷ್ಟೇ ಸ್ಥಾಯಿಯಾದವು. ಶ್ಯಾಮಕಿರಣ ತನ್ನ ತಾತನ ಸಮಸ್ಯೆ ಅರಿತನೋ ಏನೋ. ಮೆಲ್ಲಗೆ ಕಣ್ಣು ಮುಚ್ಚಿಕೊಂಡು ಮಗು ನಗುತ್ತಿತ್ತು. ಗೀತಾಂಜಲಿಯಲ್ಲಿ ಅರ್ಜುನನನ್ನು ಸಾರಥಿ ಮಾಡಿ ಕೃಷ್ಣನಿಗೆ ಗೀತೆಯ ಉಪದೇಶ ಮಾಡಿದರೆ ಹೇಗೆ ಎಂದು ರಾಮಪಾಲ ಪ್ರಶ್ನಿಸಿದನು. ಯಾರಿಗೆ ಪ್ರಶ್ನೆ ಮಾಡಿದನೆಂಬುವದು ಅವನೇ ಅರಿಯನು. ಮಗು ಶ್ಯಾಮಕಿರಣ ಪ್ರಶ್ನೆಯ ಗಾಂಭೀರ್ಯವನ್ನು ಅರಿತನೋ ಏನೋ? ನಿದ್ದೆಗಣ್ಣಿನಲ್ಲಿ ಕೇಕೆ ಹಾಕಿ ಬಲವಾಗಿ ನಕ್ಕುಬಿಟ್ಟನು. ರಾಮಪಾಲನು ತಲೆತುಂಬಿಕೊಳ್ಳುತ್ತ ಮಗುವನ್ನು ಎತ್ತಿ ತೊಟ್ಟಿಲದಲ್ಲಿ ಮಲಗಿಸಿದನು. ತೊಟ್ಟಿಲಕ್ಕೆ ನಾಲ್ಕಾರು ಜುರಿಗಳನ್ನು ಕೊಟ್ಟನು. ವಿಚಾರಲಹರಿಯಲ್ಲಿ ತೇಲುತ್ತ ಕೋಣೆಯಲ್ಲಿ ಅಲೆಯಹತ್ತಿದನು. ತನ್ನ ಗುರುದೇವನ ತೈಲ ಚಿತ್ರದೆದುರಿಗೆ ಭಯಭಕ್ತಿ ಭಾವದಿಂದ ನಿಂತುಕೊಂಡನು ವಿಚಾರಕ್ಕೆ ಬಂದದ್ದು ಹೇಗೆ ಚಿತ್ರಿಸಬೇಕು? ಎಂದು ನುಡಿಯುತ್ತ ಚಿತ್ರವೇದಿಕೆಯ ಮೇಲೆ ಮತ್ತೆ ಕುಳಿತುಕೊಂಡನು. ಸಹಜ ಭಾವಕ್ಕೆ ಬುದ್ಧಿವಂತಿಕೆಯ ಕಟ್ಟನ್ನು ಹಾಕಿ ಚಿತ್ರಿಸಬೇಕೆಂದು ಹವಣಿಸಹತ್ತಿದನು. ಸ್ಫೂರ್ತಿಯನ್ನು ಕೊಡೆಂದು ಗುರುದೇವನ ತೈಲಚಿತ್ರಕ್ಕೆ ಬೇಡಿಕೊಳ್ಳಹತ್ತಿದನು. ಕೋಣೆಯಲ್ಲಿ ಯಾರೋ ಇಣಿಕಿ ಹಾಕಿ ನೋಡಿದಂತಾಯಿತು. ರಾಮಪಾಲನಿಗೆ ಹೊರಗಿನ ಲಕ್ಷ್ಯವೇ ಇಲ್ಲ. ಮತ್ತೆ ಚಿತ್ರಸಮಾಧಿಯನ್ನು ಹೊಂದಿದನು.

ಎಂಟು ದಿವಸಗಳ ವರೆಗೆ ಮನೆಬಿಟ್ಟು ಹೋದ ರೋಹಿಣಿಯು ಕೋಣೆಯನ್ನು ಮೆಲ್ಲಗೆ ಬೆಕ್ಕಿನಂತೆ ಪ್ರವೇಶಿಸಿದಳು ಮುಂಚಿನ ಬಾಗಿಲವನ್ನು

ರಾಮಪಾಲ ಮುಚ್ಚಿದ್ದಿಲ್ಲ. ನಡುಮನೆಯಲ್ಲಿ ಕೋಣೆಯಲ್ಲಿಯ ದೀಪದಿಂದ ಮಿನುಗುವ ಪ್ರಕಾಶ ಬಿದ್ದಿತ್ತು. ನಡುಮನೆಯಲ್ಲಿ ಅಸ್ತವ್ಯಸ್ತವಾಗಿ ಬಿದ್ದ ಸಾಮಾನುಗಳನ್ನು ರೋಹಿಣಿಯು ಎಡವುತ್ತ ಕೋಣೆಯಲ್ಲಿ ಬಂದಿದ್ದಳು. ರೋಹಿಣಿಯು ಮಧ್ಯಮ ವಯಸ್ಕಳು. ನೋಡಲು ಸುಂದರಿ. ಅವಳ ಸೌಂದರ್ಯಕ್ಕೆ ಕಿರುಟ ಕೊಡುವದೆಂದರೆ ನಿತಂಬದವರೆಗೆ ಅಲೆದಾಡುವ ನಾಗ ವೇಣಿ. ಚಿಗರೆಯಂತೆ ಚಂಚಲ ಕಣ್ಣುಗಳು; ಮೃದುವಾದ ಬಳ್ಳುವ ದೇಹ ಅವಳದು. ಮೂಗು ಮಾತ್ರ ತುದಿಯಲ್ಲಿ ಸ್ವಲ್ಪ ಎತ್ತರವಾಗಿತ್ತು. ಅವಳ ನಿಲುವಿಕೆಯು ಎಲ್ಲರಿಗಿಂತಲೂ ಎತ್ತರ. ದೇಹದಲ್ಲಿ ಮೃದುತ್ವವಿದ್ದಷ್ಟು ಆಕೆಯ ಮಾತಿನಲ್ಲಿ ಮೃದುತ್ವ ತುಸು ಕಡಿಮೆ. ಬುದ್ಧಿಯ ಓಟದಿಂದ ಉದುರುವ ಮಾತುಗಳಾದ್ದರಿಂದ ಸಹಜವಾಗಿ ಅವುಗಳಲ್ಲಿ ಮೃದುತ್ವ, ಸೌಜನ್ಯ ಕಡಿಮೆ. ರೋಹಿಣಿಯು ನೋಡುವವರಿಗೆ ಸಹಜವಾಗಿಯೇ ಮೋಹಿನಿಯಾಗುತ್ತಿದ್ದಳು. ಅವಳ ಬಿಂಕ ಹಿರಿತನದ ಮಾನವನಿಗೆ ಮೋಹ ಮಾಡುತ್ತಿತ್ತು. ರೋಹಿಣಿ ಬಿಂಕದ ಸಿಂಗಾರಿ; ಬಿಂಕದ ವಯ್ಯಾರಿ ಎಂದರೂ ಸೈ. ಯಾವ ವಿಶೇಷಣಗಳಿಂದ ಅವಳನ್ನು ಕರೆದರೂ ಅವು ಅವುಗಳಲ್ಲಿಯ ನೈಸರ್ಗಿಕ ಸ್ವಭಾವಕ್ಕೆ ಅನುರೂಪವಾಗಿಯೇ ಇರುತ್ತಿದ್ದವು.

ಕೋಣೆಯ ಹೊಸ್ತಿಲನ್ನು ದಾಟಿ ಒಳಗೆ ಬಂದು ಹತ್ತು ನಿಮಿಷ ಅಂತಃಕರಣದಿಂದಲೂ ದೈನ್ಯಭಾವದಿಂದಲೂ ಸ್ನೇಹದಿಂದ ತುಂಬಿ ತುಳುಕಾಡುವ ಕಣ್ಣುಗಳಿಂದ ಕೋಣೆಯನ್ನು ನಿರೀಕ್ಷಿಸಿ ಅತೀವ ವೇಗದಿಂದ ಹೋಗಿ ತೊಟ್ಟಿಲಲ್ಲಿ ಕಣ್ಣು ಮುಚ್ಚಿಕೊಂಡು ನಗುತ್ತ ಮಲಗಿಕೊಂಡ ಶ್ಯಾಮ ಕಿರಣನನ್ನು ಎತ್ತಿಕೊಂಡಳು. ಚಿತ್ರಸಮಾಧಿಯಲ್ಲಿದ್ದ ರಾಮಪಾಲನಿಗೆ ಇದೆಲ್ಲವೂ ಕಾಣಿಸಲಿಲ್ಲ. ಎಂಟು ದಿನಗಳವರೆಗೆ ಶ್ಯಾಮಕಿರಣನಿಗೆ ಹೊಟ್ಟೆಗೆ ಕೊಟ್ಟಿಲ್ಲವಾದ್ದರಿಂದ ಅವಳೆದೆಯು ಹಾಲಿನಿಂದ ತುಂಬಿ ಬಿಗಿಯಾಗಿ ಬಿಗಿದಿತ್ತು. ತೊಡೆಯ ಮೇಲೆ ಮಲಗಿಸಿಕೊಂಡಳು. ರೋಹಿಣಿಯ ಸ್ಪರ್ಶದಿಂದಲೇ ಶ್ಯಾಮಕಿರಣ ಕಣ್ಣು ತೆಗೆದು ಮಿಟಮಿಟಿಯಾಗಿ ತಾಯಿಯ ಮೊಗವನ್ನು ನೋಡಹತ್ತಿದನು. ದಿನಾಲು ತಾನು ಹಾಲುಣ್ಣುವ ಕಾಲಕ್ಕೆ ತಾಯಿಯ ಕೊರಳಲ್ಲಿ ಅಲೆದಾಡುತ್ತಿದ್ದ ಮಂಗಳಸೂತ್ರದಲ್ಲಿ ತನ್ನ ಮೃದು

ಎಸಳುಗಳನ್ನು ಹಾಕಿ ಜಗ್ಗುತ್ತಿದ್ದಂತೆ ಇಂಪಾದರೂ ಅವನ್ನು ಪಡೆಯಬೇಕೆಂದು ಶ್ಯಾಮಕಿರಣನು ರೋಹಿಣಿಯ ಕೊರಳಿಗೆ ಕೈ ಹಾಕಿದನು. ಆಕೆಯ ಕೊರಳಲ್ಲಿ ಇಂದು ಮಾಂಗಳಸೂತ್ರವಿಲ್ಲವೆಂಬುದನ್ನು ಬಾಲಕನಿಗೆ ಹೇಗೆ ಗೊತ್ತಾಗಬೇಕು? ರೋಹಿಣಿಯು ಹಾಲಿನಿಂದ ಭಾರವಾದ ಎದೆಯನ್ನು ಮೊದಲು ಮಗುವಿಗೆ ಹೊಟ್ಟೆಗೆ ಕೊಟ್ಟು ವ್ಯಧ ಮಾಡಿಕೊಂಡಳು. ಆತನ ಉಂಗುರ ಕೂದಲುಗಳಲ್ಲಿ ಕೈಯಾಡಿಸಿ ಮುದ್ದಿಟ್ಟು ತೊಟ್ಟಿಲದಲ್ಲಿ ಮಲಗಿಸಲು ಹೋದರೆ ಶ್ಯಾಮಕಿರಣ ಮಲಗದೆ ಅವಳೆದೆಯನ್ನು ಗಟ್ಟಿಯಾಗಿ ಅಪ್ಪಿಕೊಂಡನು. ಮತ್ತೆ ಕಿರಚಹತ್ತಿದ. ರೋಹಿಣಿಯು ಆತನನ್ನು ಮಲಗಿಸದೆ ತೊಡೆಯ ಮೇಲೆ ಮಲಗಿಸಿಕೊಂಡು ರಾಮಪಾಲನ ಹಿಂಬದಿಯಲ್ಲಿ ಕುಳಿತುಕೊಂಡಳು. ರಾಮಪಾಲನಿಗೆ ಸುತ್ತಲಿನ ಸ್ಮೃತಿಯೇ ಇದ್ದಿಲ್ಲ. ತಾನು, ತನ್ನ ಚಿತ್ರ - ಇದು ಅವನ ಪರಿಸ್ಥಿತಿ

ರೋಹಿಣಿ ರಾಮಪಾಲನನ್ನು ನೋಡಿ ಬಿಕ್ಕಿದಳು. ಅಸ್ಪಷ್ಟ ವಿಶ್ವವಿದ್ಯಾಲಯದಲ್ಲಿ ಇಬ್ಬರೂ ಕೂಡಿ ತಿರುಗಾಡಿದ್ದು ನೆನಪಿಗೆ ಬಂದಿತು. ಅಂದಿನ ರಾಮಪಾಲನಲ್ಲಿಯ ಗುಣಗಳನ್ನು ಇಂದಿನ ರಾಮಪಾಲನಲ್ಲಿ ಕಾಣಬಹುದು. ತನ್ನ ಸ್ವಭಾವದಲ್ಲಿಯೇ ಪರಿಸ್ಥಿತಿಗಳಿಗನುಸಾರವಾಗಿ ಮಾರ್ಪಟ್ಟ ಬದಲಾವಣೆಯನ್ನು ಕಂಡು ಹೊಮ್ಮಿಕೊಂಡ ದುಃಖ ಹೊರಸೂಸಿತು. ಮಗುವನ್ನು ಬಗಲಲ್ಲಿ ಎತ್ತಿಕೊಂಡಳು. ಆತನ ಹಿಂಬದಿಯಲ್ಲಿ ಹೋಗಿ ನಿಂತಳು. ಆತನ ತಲೆಯ ಕೂದಲುಗಳಲ್ಲಿ ಕೈಯಾಡಿಸುತ್ತ ನಿಂತಳು. ಬೆನ್ನ ಮೇಲೆ ಕೈಯಾಡಿಸಿದಳು. ಭುಜದ ಮೇಲೆ ಬಗ್ಗಿ ತಲೆಯಿಟ್ಟಳು. ರಾಮಪಾಲ ಇಷ್ಟಾದರೂ ತಿರುಗಿ ನೋಡಲಿಲ್ಲ; ಯಾರೆಂದು ಕೇಳಲಿಲ್ಲ. ಚಿತ್ರದ ರೂಪರೇಷೆಗಳನ್ನು ಎಳೆಯುತ್ತ ಕುಳಿತಿದ್ದನು. ಆತನ ಕಣ್ಣು ಮುಚ್ಚಿದರೆ ತನ್ನನ್ನು ನೋಡಬಹುದೆಂದು ರೋಹಿಣಿಯು ಶ್ಯಾಮಕಿರಣನನ್ನು ತೊಟ್ಟಿಲದಲ್ಲಿ ಮಲಗಿಸಿದಳು. ಆತನ ಕಣ್ಣುಗಳನ್ನು ತನ್ನ ಕೈಯಿಂದ ಬಿಗಿಯಾಗಿ ಮುಚ್ಚಬೇಕೆಂದು ಪ್ರಯತ್ನ ಮಾಡಿದಳು. ಭುಜದ ವರೆಗೆ ಹೋದ ಹಸ್ತಗಳು ಮುಂದೆ ಸಾಗಲಿಲ್ಲ. ಅದೇ ಹಸ್ತಗಳಿಂದ ತನ್ನ ಕಣ್ಣುಗಳನ್ನೇ ಗಟ್ಟಿಯಾಗಿ ಮುಚ್ಚಿಕೊಂಡಳು. ಚಕ್ರ ಬಂದಿತು. ಬೀಳತಕ್ಕವಳು. ತೊಟ್ಟಿಲವನ್ನು ಹಿಡಿದು ಸಾವಕಾಶವಾಗಿ ನೆಲಕ್ಕೆ ಕುಳಿತುಕೊಂಡಳು. ಮತ್ತೆ

ಚೇತರಿಸಿಕೊಂಡಳು. ರಾಮಪಾಲನನ್ನು ಎವೆಬಡಿಯದೆ ನೋಡುತ್ತ ಕುಳಿತು ಕೊಂಡಳು. ಎಷ್ಟು ನೋಡಿದರೂ ಆಕೆಗೆ ತೃಪ್ತಿ ಆಗಲಿಲ್ಲ. ರೋ....ಹಿ ಣಿ ಎಂದು ಹೊರಗಿನಿಂದ ರಘುನಂದನ ಕೂಗಿದಂತಾಯಿತು. ಬಂದೆ ಎಂದು ಎಡವುತ್ತ ಮುಗ್ಗುತ್ತ ರೋಹಿಣಿಯು ಮುಂಚಿನ ಬಾಗಿಲವನ್ನು ದಾಟಿ ಹೊರಗೆ ಬಂದು ನಿಂತಳು. ರಘುನಂದನ ಎಂದು ಕೂಗಿದಳು. ಅವಳ ಕೂಗಿಗೆ ಉತ್ತರವೇ ದೊರೆಯಲಿಲ್ಲ. ಐದು ನಿಮಿಷ ದಿಗ್ಭ್ರಾಂತಳಾಗಿ ನೀಲಾಂಬರವನ್ನು ನೋಡುತ್ತ ನಿಂತಳು. ಮಿನುಗುವ ಚಿಕ್ಕೆಗಳನ್ನು ನೋಡಿದಳು. ಹೊಳೆಯುವ ನಕ್ಷತ್ರಗಳನ್ನು ಕಂಡಳು. ಶೀತರಶ್ಮಿಯ ಬೆಡಗಿನ ಸೊಬಗು ಅವಳಿಗೆ ಆನಂದವನ್ನೀಯಲಿಲ್ಲ. ಕ್ಷಣಕ್ಷಣಕ್ಕೆ ಚಿತ್ರವಿಚಿತ್ರ ಆಕೃತಿಗಳಲ್ಲಿ ಪರಿವರ್ತನೆ ಹೊಂದುತ್ತಿದ್ದ ಮೋಡಗಳನ್ನು ನೋಡಿದಳು. ಎಲ್ಲವೂ ಆಕೆಗೆ ನಿರುತ್ಸಾಹಕ ವೆನಿಸಿತು. ಮತ್ತೊಮ್ಮೆ ರಘುನಂದನ ಎಂದು ಕೂಗಿದಳು. ಮಾರುತ್ತರ ಬರಲಿಲ್ಲ. ತನಗೆ ಆತನ ಭ್ರಮೆಯಾಗಿರಬೇಕೆಂದು ತಿಳಿದುಕೊಂಡು ಮತ್ತೆ ಕೋಣೆಯ ಕಡೆಗೆ ತಿರುಗಿದಳು.

ಕೋಣೆಯಲ್ಲಿ ಬಂದಳು. ಮಗು ರೋದಿಸುತ್ತಿತ್ತು. ತೊಟ್ಟಿಲಕ್ಕೆ ಝುಯಿ ಹಾಕುತ್ತಿದಳು. ರಾಮಪಾಲನ ಬೆನ್ನಮೇಲೆ ಕೈಯಿಟ್ಟುಕೊಂಡು ನಿಂತುಕೊಂಡಳು. ರಾಮಪಾಲ ಏನೋ ಒಟಗುಡುತ್ತಿದ್ದ. ಕೆಲವು ಸ್ಪಷ್ಟ ಕೆಲವು ಅಸ್ಪಷ್ಟ ಮಾತುಗಳು.

"ಕೃಷ್ಣನಿಗೆ ನಾಲ್ಕು ಕೈಗಳು. ಸಾರಥಿಯಿದ್ದ ಕಾಲಕ್ಕೆ ಈ ನಾಲ್ಕು ಕೈಗಳು ಒಪ್ಪಬಹುದು. ಸವಿತ್ತಪಾಣಿಯಾಗಿ ಕುಳಿತಕಾಲಕ್ಕೆ ನಾಲ್ಕು ಕೈಗಳನ್ನು ಚಿತ್ರಿಸುವ ಬಗೆ ಹೇಗೆ?" ಎಂದು ನುಡಿದು ಕುಳಿತುಕೊಂಡಳು

"ಕೃಷ್ಣನ ಎರಡು ಕೈಗಳನ್ನು ತೆಗೆದು ಅರ್ಜುನನಿಗೆ ಹಚ್ಚಿದರಾಯಿತು"

"ಧರ್ಮ ಹಾಗೂ ಮೋಕ್ಷ ಎರಡೂ ಲಯ ಹೊಂದಿದ್ದರಿಂದ ಕಾಮ ಹಾಗೂ ಅರ್ಥ ಇವೆರಡರ ಕೈಗಳನ್ನು ಹಚ್ಚಿ ಉಳಿದ ಎರಡು ಕೈಗಳನ್ನು ಅರ್ಜುನನಿಗೆ ಹಚ್ಚಬೇಕು."

"ಯಾವ ದ್ಯೋತಕ ಕೃಷ್ಣ?"

"ಬುದ್ಧಿಯ ದ್ಯೋತಕ."

" ಅರ್ಜುನ ? ''

" ಇಂದ್ರಿಯಗಳಿಂದುಂಟಾಗುವ ಭಾವನೆಯ ದ್ಯೋತಕ ?

" ಇದೇನು ಚಿತ್ರ ? "

' ಬುದ್ಧಿಯು ಭಾವನೆಗೆ ಶರಣಾಗತವಾಗಿರುವದು. ತತ್ವಗಳನ್ನು ಭಾವನೆಯು ಮದ ಕ್ರೋಧ ಮಾತ್ಸರ್ಯಕ್ಕೆ ಉಪಯೋಗಿಸುವದು.'

' ಈ ಚಿತ್ರಕ್ಕೆ ಎಣೆಯಿಲ್ಲ. ನೋಡುವವರಿಗೆ ಕಣ್ಣಿಲ್ಲ'

' ಗುರುದೇವ ಈ ಚಿತ್ರವನ್ನು ಜನಗಳಿಗೆ ತೋರಿಸಬೇಡ. ನೀನೊಬ್ಬನೇ ನೋಡಿದರೆ ಸಾಕು. ರಥದ ನಾಲ್ಕು ಕುದುರೆಗಳನ್ನು ಯಾವ ದ್ಯೋತಕ ದಿಂದ ತೋರಿಸಲಿ ?'

ಇದಕ್ಕೆ ಹಿಂದಿನಂತೆ ರೋಹಿಣಿಯು ಉತ್ತರ ಕೊಡುವದಿಲ್ಲ. ಅವಳಿಗೆ ಏನುತ್ತರ ಕೊಡಬೇಕೆಂದು ಹೊಳೆಯಲಿಲ್ಲ. ತಾನು ಉತ್ತರಕೊಡುವೆನೆಂದು ರಾಮಪಾಲನಿಗೆ ಅರಿವಿಲ್ಲೆಂದು ಅರಿತುಕೊಂಡಳು.

' ಒಂದು ಕುದುರೆ ಆಕ್ಸಿಜನ್ ಬಾಂಬ, ಮತ್ತೊಂದು ಹಾಯಡ್ರೋಜನ ಬಾಂಬ, ಮೂರನೇದು ನಾಯಟ್ರೋಜನ ಬಾಂಬ, ಕಡೆಯ ಕುದುರೆ ಹಾಯಪರ ಹಾಯಡ್ರೊ ನಾಯಟ್ರೊಬಾಂಬ, – ಹೀಗೆ ನಾಲ್ಕು ಕುದುರೆ ಗಳನ್ನು ಚಿತ್ರಿಸಿದರೆ ಹೇಗೆ ?'

' ಬಲು ಸೊಗಸು.' ಎಂದು ರೋಹಿಣಿಯು ಮೆಲ್ಲಗೆ ನುಡಿದಳು.

ರಾಮಪಾಲ ಹೀಗೆ ತನ್ನ ವಿಚಾರ ಲಹರಿಯಲ್ಲಿ ಮಗ್ನನಾಗಿ ಕುಳಿತು ಕೊಳ್ಳುವನೆಂದು ಆಕೆಯು ಅರಿತುಕೊಂಡಳು. ಆತನ ಲಕ್ಷ್ಯ ತನ್ನ ಕಡೆಗೆ ಹೇಗೆ ಸೆಳೆಯಬೇಕೆಂದು ವಿಚಾರಮಾಡಹತ್ತಿದಳು. ಆತನ ಎಡಬದಿಯಲ್ಲಿದ್ದ ದೀಪಗಳನ್ನು ಸಣ್ಣ ಮಾಡಿದರೆ ಚಿತ್ರದಿಂದ ರಾಮಪಾಲನ ವಿಚಾರ ತಿರುಗಬಹುದೆಂದು ಆಕೆಯು ಎಣಿಕೆ ಹಾಕಿದಳು. ಮೊದಲು ಎರಡೂ ದೀಪಗಳನ್ನು ಸಣ್ಣ ಮಾಡುವದಕ್ಕಿಂತ ಆತನ ಹಿಂಬದಿಯ ದೀಪವನ್ನು ಸಣ್ಣ ಮಾಡಿದರಾಯಿತೆಂದು ಅಂದುಕೊಂಡಳು. ತೊಟ್ಟಿಲದ ಸಮೀಪದಲ್ಲಿ ಎತ್ತರದ ಮೇಲಿದ್ದ ದೀಪವು ಆತನ ಹಿಂಬದಿಯಲ್ಲಿತ್ತು. ಅದರ ಪ್ರಕಾಶವು

ಚಿತ್ರದಮೇಲೆ ಢಾಳವಾಗಿ ಬೀಳುತ್ತಿತ್ತು. ರೋಹಿಣಿಯು ಅಲ್ಲಿನ ಮೇಜನ್ನು ಹತ್ತಿ ಆ ದೀಪವನ್ನು ರಾಮಪಾಲನ ಗುರುದೇವನ ತೈಲಚಿತ್ರದ ಬದಿಯಲ್ಲಿ ಒಯ್ದಿಟ್ಟಳು. ಕೆಳಗಿಳಿದು ಐದು ನಿಮಿಷ ನಿಂತು ನೋಡಿದಳು. ಇದರಿಂದ ರಾಮಪಾಲನಲ್ಲಿ ಏನೂ ಬದಲಾವಣೆಯಾಗಲಿಲ್ಲ. ತಾನು ಚಿತ್ರಿಸುತ್ತಿದ್ದ ರಣರಂಗದ ರೂಪರೇಷೆಗಳನ್ನು ಬೇಗ ತುಂಬಬೇಕೆಂಬ ವಿಚಾರ ಈಗ ಆತನ ತಲೆಯಲ್ಲಿ. ಆತನ ಎಡಗಡೆಯಲ್ಲಿದ್ದ ದೀಪವನ್ನು ಆಕೆ ಎತ್ತಿ ತೊಟ್ಟಿಲದ ಸಮೀಪದಲ್ಲಿಟ್ಟಳು. ಮಂದ ಪ್ರಕಾಶವಾದರೂ ಆತನ ವಿಚಾರಮಗ್ನತೆ ಮಂದವಾಗಲಿಲ್ಲ. ಆತ ಜಗತ್ತನ್ನು ಮರೆತವ. ರೋಹಿಣಿಯು ಆತನ ಬಲಗೈಯಲ್ಲಿದ್ದ ರೂಪರೇಷೆಗಳನ್ನು ಬಳೆಯಲು ಸಹಾಯಕವಾದ ಕುಂಚವನ್ನೇ ಕಸಿದುಕೊಂಡು ಬಿಟ್ಟರಾಯಿತೆಂದು ನಿರ್ಧರಿಸಿದಳು. ಧೈರ್ಯಸಾಲದೆ ಒಂದೆರಡು ನಿಮಿಷ ಕಲ್ಲುಗೊಂಬೆಯಂತೆ ನಿಂತುಕೊಂಡಳು. ಆತನ ಬಲಬದಿಯಲ್ಲಿ ಹೋಗಿ ನಿಂತುಕೊಂಡಳು. ಕಣ್ಣು ಮುಚ್ಚಿಕೊಂಡು ಆತನ ಬಲಗೈಯಲ್ಲಿದ್ದ ಕುಂಚನ್ನು ಕಸಿದುಕೊಂಡಳು. ರಾಮಪಾಲನಿಗೆ ಪ್ರಜ್ಞೆ ಬಂದಿತು. ವಿಚಾರ ಮಂದಿರಗಳು ಆಕಾಶದಿಂದ ನೆಲಕ್ಕೆ ಕುಸಿದು ಅಪ್ಪಳಿಸಿದವು. ಸಿಟ್ಟಿನಿಂದ ರೇಗಿ ಬದಿಯಲ್ಲಿ ಯಾರು ನಿಂತಿರುವರೆಂಬುದನ್ನು ಅರಿಯದೆ ರೋಹಿಣಿಯ ಕೆನ್ನೆಗೆ ಬಲವಾಗಿ ಹೊಡೆದನು. ಅವರ ವಿವಾಹ ಜೀವನದಲ್ಲಿ ರಾಮಪಾಲ ರೋಹಿಣಿಗೆ ಹೊಡೆದದ್ದು ಇದೇ. ಬಲವಾಗಿ ಏಟು ಬಿದ್ದುದ್ದರಿಂದ ಕಣ್ಣಿಗೆ ಚಕ್ರಬಂದು ರೋಹಿಣಿಯು ನೆಲಕ್ಕೆ ಬೀಳತಕ್ಕವಳು. ಯಾರೋ ನೆಲಕ್ಕೆ ಬೀಳುವರೆಂದು ಆತ ಭಾವಿಸಿ ಎದ್ದು ಸಾವರಿಸಿಕೊಂಡು ಆಕೆಯನ್ನು ಹಿಡಿದುಕೊಂಡನು. ಆತನ ಕರುಣಾಮಯ ಹಸ್ತಸ್ಪರ್ಶದಿಂದಲೇ ರೋಹಿಣಿಯು ಚೇತರಿಸಿಕೊಂಡಳು ಪ್ರಕಾಶದಲ್ಲಿ ಅವಳ ನಗೆಮೊಗವನ್ನು ಕಂಡು ರಾಮಪಾಲ 'ಇದೇನು ರೋಹಿಣಿ ಇಷ್ಟು ಸರಿರಾತ್ರಿಯಲ್ಲಿ ಇಲ್ಲಿ' ಎಂದು ಅವಳನ್ನು ಮೆಲ್ಲಗೆ ಕುರ್ಚಿಯ ಮೇಲೆ ಕುಳ್ಳಿರಿಸಿದನು.

ಆತನ ಪ್ರಶ್ನೆಗೆ ಅವಳ ಉತ್ತರವೇ ಬರಲಿಲ್ಲ. ತಾನು ಅವಳಿಗೆ ಹೊಡೆದಿರುವೆನೆಂಬ ಭಾವನೆಯೇ ಅವನಲ್ಲಿ ಉಳಿಯಲಿಲ್ಲ. ಸಮಾಧಿಸ್ಥಿತಿಯಲ್ಲಿ ಅವಳ ಕೆನ್ನೆಗೆ ಹೊಡೆದದ್ದು ಆತನ ಜಾಗ್ರತಾವಸ್ಥೆಯಲ್ಲಿ ಅದರ

ಅರಿವೇ ಉಳಿಯಲಿಲ್ಲ. ರೋಹಿಣಿಯು ಮಾತ್ರ ಆತನನ್ನು ಕಣ್ಣುತುಂಬ ನೋಡುತ್ತ ಕುಳಿತುಕೊಂಡಳು. ಆತನ ಕೈಯೊಳಗಿಂದ ಕಸಿದುಕೊಂಡ ಕುಂಚವು ಹಾಗೇ ಅವಳ ಕೈಯಲ್ಲಿತ್ತು.

'ಇಷ್ಟು ಅಪರಾತ್ರಿಯಲ್ಲಿ ಹೇಗೆ ಬಂದಿ ರೋಹಿಣಿ? ನಿನಗೆ ಅಂಜಿಕೆ ಹೆಚ್ಚಿಗೆ ಬರಲಿಲ್ಲವೋ? ನಿನ್ನನ್ನು ಯಾರಾದರೂ ಇಲ್ಲಿಯ ವರೆಗೆ ತಂದು ಕಳಿಸಿದರೋ? ಮುಂಜಾವಿನಲ್ಲಿ ಬರಬೇಕಾಗಿತ್ತು.' ಎಂದು ರಾಮಪಾಲ ರೋಹಿಣಿಯ ಬೆನ್ನಮೇಲೆ ಕೈಯಾಡಿಸುತ್ತ ನುಡಿದನು.

'ನನ್ನ ಹೆಸರು ರೋಹಿಣಿ. ನಾನು ಸಂಚರಿಸತಕ್ಕದ್ದು ರಾತ್ರಿಯಲ್ಲಿ.'

'ಚಂದ್ರ ನೀಲಾಂಬರದಲ್ಲಿ ನೀನು ಒಪ್ಪುತ್ತೀಯೆ; ಇದು ಕೃಷ್ಣಪಕ್ಷ.'

'ರೋಹಿಣಿಗೆ ಎರಡೂ ಪಕ್ಷಗಳೂ ಅಷ್ಟೇ; ನನ್ನನ್ನು ಇಲ್ಲಿಯವರೆಗೆ ತಂದು ಕಳುಹಿಸಿದ್ದು ನನ್ನ ಮನಸ್ಸು. ಮನಸ್ಸಿನ ಬೆಂಬಲವಿದ್ದ ಮೇಲೆ ಅಂಜಿಕೆಯೇಕೆ ಬರುವದು. ಇರಲಿ. ಇಷ್ಟು ದಿನಗಳ ಅವಧಿಯಲ್ಲಿ ಒಂದು ಸಲವಾದರೂ ನೀವು ದ್ಯುಮಣಿಕಿರಣವನ್ನು ಕರೆದುಕೊಂಡು ಬರುವಿರೆಂದು ನಾನು ನಂಬಿದ್ದೆ.'

'ನಾವಿಬ್ಬರೂ ಬರುವದರಿಂದ ನಿನ್ನ ಸುಖಕ್ಕೆ ಅಡ್ಡಿಯಿಲ್ಲವೇ? ನಿನ್ನ ಮನಸ್ಸಿಗೆ ಚುಚ್ಚಿ ವ್ಯಥೆಪಡಿಸಬೇಕೆಂದು ಇಚ್ಛೆ ನನ್ನಲ್ಲಿ ಹುಟ್ಟಿದ್ದರೆ ನಾನು ದ್ಯುಮಣಿಕಿರಣವನ್ನು ಎತ್ತಿಕೊಂಡು ಬರಬಹುದಾಗಿತ್ತು.'

ರೋಹಿಣಿಯು ಎದ್ದು ರಾಮಪಾಲನ ಎರಡೂ ಕೈಗಳನ್ನು ಹಿಡಿದು ತನ್ನೆದುರಿಗಿದ್ದ ಕುರ್ಚಿಯ ಮೇಲೆ ಆತನನ್ನು ಕುಳ್ಳಿರಿಸಿ ತಾನೂ ಆತನ ಬದಿಯಲ್ಲಿ ಕುರ್ಚಿಯನ್ನು ಎಳೆದುಕೊಂಡು ಕುಳಿತುಕೊಂಡಳು. ಆತನ ಎರಡೂ ಹಸ್ತಗಳನ್ನು ತನ್ನ ಕಪೋಲಗಳಿಗೆ ಹಚ್ಚಿಕೊಂಡು 'ರಾಮಪಾಲಾ, ನೀವು ಇಂದು ನ್ಯಾಯಾಲಯಕ್ಕೆ ಬರುವಿರೆಂದು ನಂಬಿದ್ದೆ.' ಎಂದು ಉಸುರುಗರೆದು ರೋಹಿಣಿಯು ಮಾತನಾಡಿದಳು.

ಅವಳ ಕಂದಿದ ಮೊಗವನ್ನು ನೋಡುತ್ತ 'ಇಂದೇಕೆ ನ್ಯಾಯಾಲಯಕ್ಕೆ ಬರುವದು?' ಎಂದು ತನ್ನ ಹಸ್ತಗಳನ್ನು ಬಿಡಿಸಿಕೊಂಡು ಕೇಳಿದನು.

'ಇಂದು ನಿಮ್ಮ Divorce suit, ಇದ್ದಿಲ್ಲವೇ ?'

'ಅದು ನನಗೆ ಗೊತ್ತಿಲ್ಲ; ಇದ್ದರೂ ಇರಬಹುದು.'

'ನೀವು ಇಂದು ವಿವಾಹ ವಿಚ್ಛೇದನಕ್ಕೆ ಅಡ್ಡಿಹಾಕಲು ಎದುರಿಸುವಿರೆಂದು ನಾನು ತಿಳಿದು ಕೊಂಡಿದ್ದೆ.'

'ಅದನ್ನು ಎದುರಿಸಿ ನಿನಗೆ ಆತಂಕ ಮಾಡಿದರೆ ನನಗೆ ಬರುವದೇನು ಪುರುಷಾರ್ಥ.'

'ನಿಮ್ಮ ಹೆಂಡತಿಯು ನಿಮ್ಮ ಕೈ ಬಿಟ್ಟು ಹೋದರೂ ನಿಮಗೆ ಸಿಟ್ಟಿಲ್ಲವೇ ?'

'ನನ್ನ ಅಂಕಿತದ ಆಳು ಎಂಬ ಭಾವನೆ ನನ್ನಲ್ಲಿ ನೆಲೆಗೊಂಡಿದ್ದರೆ ನೀನು ನನ್ನನ್ನು ಬಿಟ್ಟು ಹೋದರೆ ಸಿಟ್ಟು ಬರಬಹುದಾಗಿತ್ತು. ನನ್ನ ದೇಹದಲ್ಲಿರುವ ಜೀವದಂತೆ ನಿನ್ನ ದೇಹದಲ್ಲಿ ಆದರೂ ವಿಕಾಸತೊಂದಬೇಕೆಂಬ ಆಕಾಂಕ್ಷೆಯುಳ್ಳ ಒಂದು ಜೀವ ಇರುವದು. ರಘುನಂದನನ ಸಂಗಡ ನೀನು ಬಾಳುವೆ ಮಾಡುವದರಿಂದ ನಿನ್ನ ವಿಕಾಸವಾದರೂ ಆಗಬಹುದು. ಸಮ ನೆಲದಲ್ಲಿ ಹರಿಯುವ ಎರಡು ಪ್ರವಾಹಗಳು ಎಂದೂ ಕೂಡಿಕೊಳ್ಳುವದಿಲ್ಲ;

'ಆದರಂತೆಯೇ ಕೆಳಗೆ ಹರಿಯುವ ಪ್ರವಾಹವು ಮೇಲೆ ಹರಿಯುವ ಪ್ರವಾಹಕ್ಕೆ ಕೂಡಿಕೊಳ್ಳಲಾರದು.'

'ರಘುನಂದನ ನಿನ್ನನ್ನು ಕೇಳುವನೋ? ನೀನು ಸ್ವಲ್ಪ ಸಿಡಿಕಿನವಳು, ಬಿಂಕಿನವಳು, ಪರದೇಶದಲ್ಲಿ ಶಿಕ್ಷಣ ಹೊಂದಿದವಳೆಂದು ಹೆಮ್ಮೆ. ಇವೆಲ್ಲವನ್ನು ರಘುನಂದನ ಸಂಭಾಳಿಸಿಕೊಂಡು ಹೋಗುವನೋ ?'

'ನನ್ನ ಯಾವದೇ ಕೃತಿಗಾದರೂ ನಿಮ್ಮಲ್ಲಿ ಸ್ವಲ್ಪವೂ ಸಿಟ್ಟು ಬರುವದಿಲ್ಲ. ನಾನು ಅನೀತಿವಂತಳು. ಇಂದ್ರಿಯಗಳ ಸುಖಕ್ಕೆ ಹಾತೊರೆದು ಗಂಡ ಮಕ್ಕಳನ್ನು ತ್ಯಜಿಸಿ ಹೋದವಳು. ಎಂಟು ದಿನಗಳ ವರೆಗೆ ನಿಮ್ಮ ಪದರಿನಲ್ಲಿ ಶ್ಯಾಮಕಿರಣನನ್ನು ಬಿಟ್ಟು ಹೋದರೂ ನಿಮ್ಮಲ್ಲಿ ನನ್ನ ಮೇಲೆ ಸ್ವಲ್ಪಾದರೂ ಸಿಟ್ಟಿನ ಅಂಕುರ ತೋರಲೊಲ್ಲದು.'

'ವಿಚ್ಛೇದನ ನಿನಗೆ ಸಿಕ್ಕಿತೋ ಇಲ್ಲೋ ?'

'ನೀವು ಯಾವಾಗಲೂ ಶಿಖಂಡಿತ್ವವನ್ನೇ ತಾಳುವಿರಿ. ಪ್ರಪಂಚದಲ್ಲಿ ಕೋಪ ಬೇಕು. ತನ್ನದೆಂಬ ಭಾವನೆ ಬೇಕು. ನಿಮ್ಮಲ್ಲಿ ಇವೆರಡಕ್ಕೂ ಸ್ಥಾನವೇ ಇಲ್ಲ. ನನ್ನ ಆಯುಷ್ಯದಲ್ಲಿ ನೀವು ಹೊಡೆದದ್ದು ಇಂದೇ. ಅದು ಸಿಟ್ಟಿನ ಹೊಡೆತವಾದರೂ ನನ್ನ ಜೀವನಕ್ಕೆ ಸುಖಕೊಟ್ಟಿತು. ನಿಮ್ಮಲ್ಲಿಯ ಸಿಟ್ಟು, ಅಸೂಯೆ, ಇವುಗಳನ್ನು ನಾನು ಸಹನ ಮಾಡಬಲ್ಲೆ, ಆದರೆ ನೀವು ತೋರಿಸುವ ಕರುಣೆ ನನ್ನ ಜೀವನಕ್ಕೆ ನರಕದಲ್ಲಿಯ ಬರೆಗಿಂತ ಚುರುಕಾಗಿರುವದು. ಹೆಂಗಸಿಗೆ ಸ್ವೈಸರ್ಗಿಕವಾಗಿ ಗಂಡಸಿನ ಸಿಟ್ಟಿನ ಕಡಿವಾಣಬೇಕು. ಅದರಿಂದಲೇ ಅವಳ ಜೀವನದ ಬೆಳವಣಿಗೆ. ಗಂಡ ಹೆಂಡಂದಿರ ಸಿಟ್ಟಿನ ಚಿಕ್ಕಾಟದಲ್ಲಿ ಅವರ ವ್ಯಕ್ತಿ ವಿಕಾಸಹೊಂದುವಂತೆ ಬುದ್ಧಿವಾದದಿಂದ ಆಗುವದಿಲ್ಲ. ನನ್ನದು ಉಪ್ಪುಂಡ ದೇಹ'

'ನಾನು ಮಾತ್ರ ಉಪ್ಪು ಉಂಡಿಲ್ಲ!'

'ಉಪ್ಪು ಉಂಡಿದ್ದರೆ ನೀವು ಶಿಖಂಡಿತ್ವವನ್ನು ತಾಳುತ್ತಿದ್ದಿಲ್ಲ. ನಾನು ರಘುನಂದನನ ಬೆನ್ನು ಹತ್ತಿದಾಗ್ಗೆ ನೀವು ಸಿಟ್ಟಿನಿಂದ ನನ್ನನ್ನು ಅಂಕಿತದಲ್ಲಿಡಬೇಕಾಗಿತ್ತು.'

'ಇರಲಿ ಸುಮ್ಮನೆ ನಿದ್ರೆಗೆಡಬೇಡ. ನೀನು ಹೋದ ಮೇಲೆ ನಾನು ನಿನ್ನ ಕೋಣೆಯ ಬಾಗಿಲವನ್ನೇ ತೆಗೆದಿಲ್ಲ. ದೀಪಹಚ್ಚಿಕೊಂಡು ಮಲಗಿಕೊಳ್ಳು. ಬೆಳಗಿನಲ್ಲಿ ವಿಚಾರ ಮಾಡೋಣವಂತೆ, ಎಂದು ನುಡಿದು ರಾಮಪಾಲನು ಕುಂಚನ್ನು ತೆಗೆದುಕೊಂಡು ಮತ್ತೆ ಚಿತ್ರ ಪಟಲೆದುರಿಗೆ ವೇದಿಕೆಯ ಮೇಲೆ ಕುಳಿತುಕೊಂಡನು'

ಕುಳಿತವಳು ಎದ್ದು ನಿಂತಳು. ರಾಮಪಾಲನ ಬೆನ್ನು ಮೇಲೆ ಕೈ ಯಾಡಿಸಿದಳು. 'ನಿಮ್ಮಲ್ಲಿ ಇರಲು ನಾನು ತಕ್ಕವಳಲ್ಲ, ಎಂದು ಸರಿದು ನಿಂತುಕೊಂಡಳು.

'ನಿಲ್ಲಬೇಡ ನಿದ್ರೆಗೆಡಬೇಡ. ಹೋಗಿ ಮಲಗಿಕೊಳ್ಳು. ರಘುನಂದನನ ಮನೆ ದೂರವಿರುವದು. ಇಷ್ಟು ನಡರಾತ್ರಿಯಲ್ಲಿ ಹೋಗಬೇಡ, ಎಂದು ರಾಮಪಾಲ ನುಡಿದು ಚಿತ್ರವನ್ನು ನೋಡುತ್ತ ಕುಳಿತುಕೊಂಡನು.

ಆಕೆಯನ್ನು ಆಲಕ್ಷಿಸಿ ಕುಳಿತದ್ದು ರೋಹಿಣಿಗೆ ಬರೆಕೊಟ್ಟಂತಾಯಿತು. ತೊಟ್ಟಿಲ ಸಮೀಪಕ್ಕೆ ಹೋಗಿ ಮಲಗಿದ್ದ ಶ್ಯಾಮ ಕಿರಣನನ್ನು ಮುದ್ದಿಸಿ ತಾಯ್ತನದ ದೃಷ್ಟಿಯಿಂದ ಆತನನ್ನು ನೋಡುತ್ತ ನಿಂತಳು.

ರಾಮಪಾಲನ ಮೇಲಿನ ಸಿಟ್ಟಿನಿಂದ ತೊಟ್ಟಿಲವನ್ನು ಬಲವಾಗಿ ತೂಗಿ ಮಿಂಚಿನಂತೆ ಹೊರಬಿದ್ದಳು. ರಾಮಪಾಲ ತಿರುಗಿ ನೋಡುವಷ್ಟರಲ್ಲಿಯೇ ಮಾಯವಾಗಿದ್ದಳು. ವೇದಿಕೆಯಿಂದ ಕೈಯಲ್ಲಿ ಕುಂಚವನ್ನು ಹಿಡಿದುಕೊಂಡು ಎದ್ದನು. ಹೊರಗೆ ಹೋಗಿ ರೋಹಿಣಿ, ರೋಹಿಣಿ, ಎಂದು ಕೂಗಿದನು. ರೋಹಿಣಿಯು ಉತ್ತರ ಕೊಡಲಿಲ್ಲ. ಕತ್ತಲೆಯಲ್ಲಿ ಎಲ್ಲಿ ಮಾಯವಾದಳೋ ಎಂದು ಬೀದಿಗುಂಟ ಕೂಗುತ್ತ ಐದು ನಿಮಿಷ ಹೋದ, ಆವಳು ಕಾಣಲಿಲ್ಲ. ನಿರುಪಾಯನಾಗಿ ಮನೆಯ ಕಡೆಗೆ ತಿರುಗಿದ.

ರೋಹಿಣಿಯು ಬಲವಾಗಿ ತೊಟ್ಟಿಲವನ್ನು ತೂಗಿದ್ದರಿಂದ ಮೇಲಿಟ್ಟ ದೀಪಕ್ಕೆ ತೊಟ್ಟಿಲವು ತಾಕಿ ಕೆಳಗೆ ಬೀಳುವ ಮೊದಲು ರಾಮಪಾಲನ ಗುರು ದೇವನ ತೈಲಚಿತ್ರಕ್ಕೆ ತಾಕಿ ತೊಟ್ಟಿಲದ ಹತ್ತಿರ ಬಿದ್ದಿತು. ತೈಲ ಚಿತ್ರಕ್ಕೆ ಉರಿಹತ್ತಿತ್ತು. ತೊಟ್ಟಿಲದ ಸಮೀಪದಲ್ಲಿದ್ದ ಆರಿವೆ ಅಂಚಡಿಗಳಿಗೆ ಉರಿ ಹತ್ತಿ ಕೋಣೆಯೆಲ್ಲ ಹೊಗೆಯಿಂದ ಮುಸಿಕಿ ಹೋಗಿತ್ತು. ರಾಮಪಾಲ ತಿರುಗಿ ಬರುವಷ್ಟರಲ್ಲಿಯೇ ಜ್ವಾಲೆಗಳು ಪ್ರಖರವಾಗಿ ನಾಲ್ಕೂ ಕಡೆಗೆ ಪಸರಿಸಿದ್ದವು. ನಡುಮನೆಯಲ್ಲಿ ರಾಮಪಾಲ ಬಂದನು. ಕೋಣೆಯಲ್ಲಿ ಜ್ವಾಲೆಗಳ ಪ್ರಖರವನ್ನೂ ಚಟ್ ಪಿಟಲವೆಂಬ ಸಪ್ಪಳವನ್ನೂ ಕೇಳಿ ಗಾಬರಿ ಯಾಗಿ ಒಂದು ನಿಮಿಷ ನಿಂತನು. ಕೈಯಲ್ಲಿಯ ಕುಂಚವನ್ನು ಒಗೆದು ಹೊಗೆಯಿಂದ ಮುಸುಕಿದ ಕೋಣೆಯಲ್ಲಿ ನುಗ್ಗಿದನು. ಮೊದಲು ಗುರು ದೇವನ ತೈಲ ಚಿತ್ರ ಉಳಿಸಬೇಕೆಂದು ಆತನು ಧಾವಿಸಿ ಚಿತ್ರದ ಕಡೆಗೆ ಹೋದನು. ತೊಟ್ಟಿಲವು ಜ್ವಾಲೆಯಿಂದ ಉರಿಯುತ್ತಿತ್ತು. ಶ್ಯಾಮ ಕಿರಣನ ಆರ್ತ ಧ್ವನಿ ರಾಮಪಾಲನ ಹೃದಯವನ್ನು ನಡುಗಿಸಿತು. ತೈಲ ಚಿತ್ರವನ್ನು ಬಿಟ್ಟು ಶ್ಯಾಮಕಿರಣನನ್ನು ಬದುಕಿಸಬೇಕೆಂದು ತೊಟ್ಟಿಲಕ್ಕೆ ಹೋಗಿ ಕೈ ಹಾಕಿದನು. ಅರ್ಧ ಸುಟ್ಟು ಉರಿಯುತ್ತಿದ್ದ ಗುರುದೇವನ ತೈಲ ಚಿತ್ರದ ಕಡೆಗೆ ಮತ್ತೆ ಕಣ್ಣುಗಳು ಹೋದವು. ತೊಟ್ಟಿಲಲ್ಲಿಯ ಕೈಗಳನ್ನು ತಗೆದು

ಕೊಂಡು ಆ ತೈಲಚಿತ್ರದ ಕಡೆಗೆ ಧಾವಿಸಿದನು. ಅದನ್ನು ಬಲವಾಗಿ ಗೋಡೆಯಲ್ಲಿ ಬಡಿದು ಕಟ್ಟಿದ್ದರಿಂದ ಅದು ಆತನ ಕೈಗೆ ಬರಲಿಲ್ಲ. ಇತ್ತ ಶ್ಯಾಮಕಿರಣನ ಹೃದಯವಿದಾರಕ ಧ್ವನಿ; ಅತ್ತ ಗುರುದೇವನ ಚಿತ್ರದ ಆಹುತಿ. ಆತನಿಗೆ ಏನೂ ತೋಚದೆ ಚಿತ್ರದ ಸಮೀಪಕ್ಕೆ ತೊಟ್ಟಿಲವನ್ನು ಎಳೆದನು. ಒಂದು ಕೈಯಿಂದ ಚಿತ್ರವನ್ನು ಜಗ್ಗಲು ಪ್ರಯತ್ನ ಮಾಡಹತ್ತಿದನು. ಮತ್ತೊಂದು ಕೈಯಿಂದ ಶ್ಯಾಮಕಿರಣನನ್ನು ಎತ್ತಲು ಹವಣಿಸಹತ್ತಿದ.

ಮನೆಯ ಮೇಲ್ಭಾಗದಿಂದ ಉರಿಯು ಏಳಹತ್ತಿತು. ಬೀದಿಯಲ್ಲೆಲ್ಲ ಉರಿಯ ಬೆಳಕು ಬಿದ್ದಿತ್ತು. ರಾಮಪಾಲ ಓದುತ್ತ ಬಂದಾಗ್ಗೆ ರೋಹಿಣಿಯು ಒಂದು ಗಿಡದ ಬುಡದಲ್ಲಿ ಕತ್ತಲೆಯಲ್ಲಿ ಅಡಗಿಕೊಂಡು ನಿಂತಿದ್ದಳು. ಅವಳಿಗೆ ಇತ್ತ ರಘುನಂದನನ ಮನೆಗೆ ಹೋಗಲಿಕ್ಕೆ ಕಾಲುಗಳೇ ಏಳಲಿಲ್ಲ. ರಾಮಪಾಲನು ತಿರುಗಿ ಹೋದರೂ ಅವಳು ಅಲ್ಲೆ ನಿಂತುಕೊಂಡಿದ್ದಳು. ವನವಿಹಾರದಿಂದ ಜ್ವಾಲೆಗಳು ಏಳುತ್ತಿರುವದನ್ನು ಅವಳು ಕಂಡಳು. ಗಾಬರಿಯಾಗಿ ಧಾವಿಸುತ್ತ ಬಂದಳು. ನಡುಮನೆಯಲ್ಲಿ ಹೊಗೆಯು ಮುಸುಕಿತ್ತು. 'ರಾಮಪಾಲ, ರಾಮಪಾಲ,' ಎಂದು ಕೂಗಹತ್ತಿದಳು. ಉತ್ತರವೇ ಬರಲಿಲ್ಲ. ಕೋಣೆಯಲ್ಲಿ ಧಾವಿಸಿದಳು. ಜ್ವಾಲೆಗಳಿಂದ ಉರಿಯುತ್ತಿದ್ದ ಮೇಲ್ಮಾಳಿಗೆಯು ರಾಮಪಾಲ, ಚಿತ್ರ ಇವುಗೂ ತೊಟ್ಟಿಲದ ಮೇಲೆ ಬಿದ್ದಿತು. ಅಯ್ಯೋ ಎಂದು ಧಾವಿಸಿದಳು. ರಾಮಪಾಲನನ್ನು ಹಿಡಿಯಲು ಪ್ರಯತ್ನಿಸಹತ್ತಿದಳು.

ಮಾರುತನು ಬಲವಾಗಿ ಬೀಸಹತ್ತಿದನು. ಅಗ್ನಿಯ ಜ್ವಾಲೆಗಳು ಸುತ್ತಲೂ ಪಸರಿಸಿದವು. ವೇಗದಿಂದ ಬೀಸುವ ಗಾಳಿಯು ಮನೆಯಲ್ಲಿಯೂ ತುಂಬಿಕೊಂಡಿತು. ವನವಿಹಾರದ ಮುಂಚಿನ ಬಾಗಿಲವನ್ನು ಪವಮಾನನು ರಭಸದಿಂದ ಬೀಸಿ ಮುಚ್ಚಿದನು.



# ಮುದ್ದಿಸ–ಮಿಂಡಿ

ತನ್ನ ನೆರಳಿಗೆ ತಾನೆ ಹೆದರುವ ಬೊಮ್ಮನಹಳ್ಳಿಯ ಬೊಮ್ಮಯ್ಯನು ಇಂದು ಏನೋ ವಿಷವೇಳೆ ಇತ್ತೆಂದು ತನ್ನ ಮಗನಾದ ಶಂಕರನೊಂದಿಗೆ ಕ್ಷುಲ್ಲಕ ಕಾರಣದ ಸಲುವಾಗಿ ಮಾತಿಗೆ ಮಾತು ಬೆಳೆದು ಮನಸ್ತಾಪ ಮಾಡಿಕೊಂಡಿದ್ದನು. ಶಂಕರನಾದರೂ ಎಂದೂ ತಂದೆಯ ಎದುರಿಗೆ ನಿಂತು ಎದುರು ಮಾತು ಆಡಿದವನಲ್ಲ. ಬೊಮ್ಮಯ್ಯನ ನುಡಿ ಆತನಿಗೆ ಶಿರಸಾ ಮಾನ್ಯ. ತಂದೆಯ ಉಗುಳು ದಾಟಲಾರದ ಮಗನು ಬೊಮ್ಮಯ್ಯನ ಸಂಗಡ ಬಡೆದಾಡಿ, ಮನೆಯಲ್ಲಿ ನಿಂತು ನೀರು ಕುಡಿಯಲಿಕ್ಕಿಲ್ಲವೆಂದು ಕೂಗಾಡಿ, ಬೇರೆ ಮನೆ ಮಾಡಿ ತನ್ನ ಹೆಂಡತಿಯನ್ನು ಇಂದು ಸೂರ್ಯಾಸ್ತ ಆಗುವದರೊಳಗಾಗಿಯೇ ಕರೆದುಕೊಂಡು ಹೋಗುವೆನೆಂದು ಹೇಳಿ ಮನೆಯ ಹೊಸ್ತಿಲವನ್ನು ದಾಟಿ ಹೊರಬಿದ್ದಿದ್ದನು. ಮಗನನ್ನು ತಿರುಗಿ ಕರೆಯಬೇಕೆಂದು ತಂದೆಗಾದರೂ ಅನಿಸಲಿಲ್ಲ. ಸಿಟ್ಟಿನ ಕೈಯಲ್ಲಿ ಬುದ್ಧಿಯನ್ನು ಕೊಟ್ಟಿದ್ದರಿಂದ ಬೊಮ್ಮಯ್ಯ ವಿಚಾರಶೂನ್ಯನಾಗಿದ್ದನು. ತಂದೆ ಮಕ್ಕಳ ಬಡಿದಾಟವನ್ನು ನೋಡುತ್ತ ಪಾರೂ ಅಲ್ಲಿಯೇ ನಿಂತಿದ್ದಳು. ಇತ್ತ ಮಾವನಿಗೂ ಹೇಳುವಷ್ಟು ಧೈರ್ಯ ಅವಳಿಗಿದ್ದಿಲ್ಲ. ಗಂಡನು ತನ್ನೊಡೆಯ, ಅವನಿಗೆ ಹೇಳುವದಂತೂ ದೂರ ಉಳಿಯಿತು. ಸೊಸೆ ಬುದ್ಧಿ ಹೇಳಿದರೆ ಅಭಿಮಾನ ಮುಕ್ಕಾಗುವದೆಂದು ತಿಳಿದುಕೊಳ್ಳುವ ಮಾವ. ಎಷ್ಟೆಂದರೂ ಹೆಂಡತಿ ಅವಳು ತನಗೆ ಉಪದೇಶ ಮಾಡಿದರೆ ತನ್ನ ಪುರುಷತ್ವಕ್ಕೆ ಪೆಟ್ಟು ತಗಲುವದೆಂದು ತಿಳಿದುಕೊಳ್ಳುವ ಗಂಡ. ಅಭಿಮಾನಗಳ ತಾಕಲಾಟದಲ್ಲಿ ಪಾರೂ ಬಾಯಿಯಲ್ಲಿ ಉಪ್ಪು ಹಾಕಿಕೊಂಡು ಕುಳಿತಿದ್ದಳು. ಒಂದಿಷ್ಟು ತುಟಿ ಎರಡು ಮಾಡಲಿಲ್ಲ. ಎಂದೂ ಬಡೆದಾಡದವರು ಇಂದು ಬಡಿದಾಡಿದ್ದನ್ನು ಕಂಡು ಅವಳ ಮನಸ್ಸು ಕಹಿಯಾಯಿತು. ಬಗಲಲ್ಲಿ ಕೊಟ್ಟೆಯನ್ನು ಕಟ್ಟಿಕೊಂಡು ನದಿಗೆ ಪಾರೂ ಹೊರಟಳು. ಹಜಾರದಲ್ಲಿ ಬೊಮ್ಮಯ್ಯ

ಮುಸುಕು ಹಾಕಿಕೊಂಡು ಮಲಗಿಕೊಂಡನು. ಪಾರೂ ನದಿಗೆ ಹೋಗುವ ಮುಂಚೆ ಹೊಲದಲ್ಲಿ ಪರರ ದನಕರುಗಳು ಹೊಕ್ಕು, ನಿಂತ ಬೆಳೆಯನ್ನು ಹಾಳು ಮಾಡುವದರಿಂದ ಹೊಲಕ್ಕೆ ತಾನು ಬರುವವರೆಗೆ ಹೋಗ ಬೇಕೆಂದು ಧೈರ್ಯತಾಳಿ ಬೊಮ್ಮಯ್ಯನಿಗೆ ಹೇಳಿದಳು. ಬೊಮ್ಮಯ್ಯ ಹಾಕಿದ ಮುಸುಕು ತೆಗೆಯಲಿಲ್ಲ; ಕಾಯ್ ಅನ್ನಲಿಲ್ಲ; ಕುಟ್ ಅನ್ನಲಿಲ್ಲ.

ಬೊಮ್ಮಯ್ಯನದು ಮೂಟವಾದ ಸಂಸಾರ; ಅತನ ಹೆಂಡತಿ ಎರಡು ವರುಷಗಳ ಹಿಂದೆ ಲಕ್ಷ್ಮಿಯೆಂಬ ಚಿಕ್ಕ ಹುಡುಗಿಯನ್ನು ಬಿಟ್ಟು ಮೃತ ಪಟ್ಟಿದ್ದಳು. ಒಂದು ವರುಷವವರೆಗೆ ಮನೆಯಲ್ಲಿ ಕೈಬಾಯಿಯನ್ನು ಸುಟ್ಟು ಕೊಂಡು ಬೇಜಾರಪಟ್ಟು, ಹರೆಯದಿಂದ ಉಕ್ಕುತ್ತಿದ್ದ ಮಗ ಶಂಕರನಿಗೆ ನೆರೆಹಳ್ಳಿಯ ಹುಡುಗಿಯನ್ನು ತಂದು ಮದುವೆ ಮಾಡಿದ್ದನು. ಮದುವೆಯ ಕಾಲಕ್ಕೆ ಸೊಸೆಯ ಜಾತಿಕೋತಿಗಳನ್ನು ಕೇಳಲಿಲ್ಲ. ತಾಯಿಯ ತಳಿಯನ್ನು ವಿಚಾರಿಸಲಿಲ್ಲ. ರೂಪದಲ್ಲಿ ರತಿಯನ್ನು ಮಿಕ್ಕಿಸುವ ಹುಡುಗಿಯನ್ನು ಕಂಡು ಜೋತು ಬಿದ್ದು ಶಂಕರನಿಗೆ ಲಗ್ನಮಾಡಿದನು. ಪಾರೂ ಅತ್ತೆಯ ಮನೆಗೆ ಬಾಳುವೆ ಮಾಡಲಿಕ್ಕೆ ಬಂದು ಐದಾರು ತಿಂಗಳುಗಳಾದವು. ಮಗ ಸೊಸೆಯ ಪ್ರೇಮದ ಬಾಳುವೆಯನ್ನು ಕಂಡು ಬೊಮ್ಮಯ್ಯ ಹಿರಿಹಿರಿ ಹಿಗ್ಗುತ್ತಿದ್ದ. ತಾನು ಮೊಮ್ಮಗನನ್ನು ಇನ್ನುಮೇಲೆ ಕಾಣುವ ಭಾಗ್ಯ ತನಗೆ ಬರುವದೆಂದು ಮನದಲ್ಲಿ ನೆನೆದುಕೊಂಡು ಆನಂದಪಡುತ್ತಿದ್ದ. ಸೊಸೆಯ ಸರಿಯಾದ ನಡತೆಯನ್ನು ಕಂಡು ಬೊಮ್ಮಯ್ಯ ಐದುನೂರು ರೂಪಾಯಿ ತೆರವು ಹೋದರೂ ಚಿಂತೆಯಿಲ್ಲ; ಬಟ್ಟುಕಟ್ಟುವ ಸೊಸೆಯು ಸಿಕ್ಕಳೆಂದು ಮನದಲ್ಲಿ ಆನಂದದಿಂದ ಜಿಗಿಯುತ್ತಿದ್ದ.

ಲಕ್ಷ್ಮೀ ಆದರೂ ಪಾರೂ ಅಂದರೆ ಬಿದ್ದು ಸಾಯುತ್ತಿದ್ದಳು. ಒಂದು ಅರಗಳಿಗೆ ಪಾರೂನನ್ನು ಬಿಟ್ಟಿರುವದೆಂದರೆ ಅವಳ ಜೀವಕ್ಕೆ ಬರುತ್ತಿತ್ತು. ನೆರಳು ದೇಹವನ್ನು ಬಿಟ್ಟಿರಬಹುದು; ಆದರೆ ಲಕ್ಷ್ಮೀ ಪಾರೂನನ್ನು ಬಿಟ್ಟಿರಲು ಸಾಧ್ಯವಿದ್ದಿಲ್ಲ. ಪಾರೂ ಇಂದು ನದಿಗೆ ಹೋಗುವಮುಂಚೆ ಲಕ್ಷ್ಮೀ ಶಾಲೆಗೆ ಹೋಗಿದ್ದಳು.

'ಏಕೆ ಪಾರೂ ಇಂದು ಹೊಲಕ್ಕೆ ಹೋಗುವದಿಲ್ಲವೇ?' ಎಂದು ಭೆಟ್ಟಿಯಾದ ಅವಳ ಓರಗೆಯ ಗೆಳತಿಯರು ಕೇಳುತ್ತಿದ್ದರು. 'ದೀಪಾವಳಿಯ

ಸಲುವಾಗಿ ಮನೆಯಲ್ಲಿಯ ಎಲ್ಲ ಅರಿವೆ ಅಂಚಡಿಗಳನ್ನು ನದಿಯಲ್ಲಿ ಸ್ವಚ್ಛ ಮಾಡಿಕೊಂಡು ಬರುವೆ, ಎಂದು ಹೇಳುತ್ತ ಅಗಸೆಯ ಬಾಗಿಲವನ್ನು ದಾಟಿದಳು. ನದೀತೀರದ ಕಡೆಗೆ ಅರ್ಧ ಕೂಗಳತೆ ಪಾರೂ ಹೋಗಿದ್ದಳೋ ಇಲ್ಲೋ ಅವಳಿಗೆ ಮನೆಗೆ ತಿರುಗಿ ಹೋಗಬೇಕೆಂದು ಅನಿಸಹತ್ತಿತು. ಕಾಲುಗಳು ಮುಂದೂ ಸಾಗಲಿಲ್ಲ; ಹಿಂದೂ ಎಳೆಯಲಿಲ್ಲ. ವಿಚಾರಶೂನ್ಯಳಾಗಿ ಐದಾರು ನಿಮಿಷ ಕಾಲುನಡುಗೆಯ ದಾರಿಯಲ್ಲಿಯೇ ಮೊಟ್ಟೆಯನ್ನಿಟ್ಟು ಹಣೆ ಹಿಡಿದುಕೊಂಡು ಕುಳಿತಳು. ಹಾರುವ ಬಲಗಣ್ಣಿಗೆ ಅಂಗಾಲದಲ್ಲಿಯ ಮಣ್ಣನ್ನು ಹಚ್ಚಿ ಬೇಸತ್ತಳು. ತೊಂಡೇ ಹಣ್ಣಿನ ಮೃದುವಾದ ತುಟಿಗಳು ನಡುಗಹತ್ತಿದವು. ಎದೆಯು ಢವಢವನೆ ಬಡಿಯಹತ್ತಿತು. ಸುತ್ತಲೂ ನೋಡಿ ತಲೆಯ ಮೇಲೆ ಮತ್ತೆ ಮೊಟ್ಟೆಯನ್ನಿಟ್ಟುಕೊಂಡು ನದಿಯ ಕಡೆಗೆ ನಡೆದಳು. ಎಷ್ಟು ಮುಂದೆ ಹೋಗಬೇಕೆಂದು ಪ್ರಯತ್ನಿಸಿದರೂ ಕಾಲುಗಳು ಹಿಂದೇ ಜಗ್ಗುತ್ತಿದ್ದವು. ತನ್ನ ಅಧೀರ ಮನಸ್ಸಿಗೆ ಬಲವಾಗಿ ಛೀ ಹಾಕಿದಳು. ದೂರದಲ್ಲಿದ್ದ ಎದುರಿನ ದಿಬ್ಬದ ಮೇಲಿಂದ ನಾಲ್ಕಾರು ಜನಗಳನ್ನು ಕಟ್ಟಿಕೊಂಡು ತನ್ನ ತಾಯಿಯು ಬರುತ್ತಿದ್ದುದನ್ನು ಕಂಡಳು. ಮೈ ಬೆವರಿತು. ಕಣ್ಣಿಗೆ ಚಕ್ರಬಂದಿತು. ತಲೆಯ ಮೇಲಿನ ಮೊಟ್ಟೆ ನೆಲಕ್ಕೆ ದೊಪ್ಪೆಂದು ಬಿದ್ದಿತು. ಸ್ಮೃತಿ ತಂದುಕೊಂಡು ಬಿದ್ದ ಮೊಟ್ಟೆಯನ್ನು ಮತ್ತೆ ತಲೆಯ ಮೇಲಿಟ್ಟುಕೊಂಡು ಹೆಜ್ಜೆಗಳನ್ನು ತಿರುಗಿಸಿ ಮನೆಯ ಕಡೆಗೆ, ಕರವನ್ನು ಬಿಟ್ಟ ಆಕಳದಂತೆ ಧಾವಿಸಿದಳು. ಅವಳು ಹೋಗುವ ವೇಗವನ್ನು ಕಂಡು ಬೀದಿಯಲ್ಲಿಯ ಜನರು ಅವಳಿಗೆ ದೆವ್ವ ಬಡಿದಿರುವದೆಂದು ಅಂದುಕೊಂಡರು. ಮನೆಯ ಹೊಸ್ತಿಲದಲ್ಲಿ ಕಾಲಿಟ್ಟ ಕೂಡಲೆ ತಲೆಯ ಮೇಲಿನ ಮೊಟ್ಟೆಯನ್ನು ಅಂಗಳದಲ್ಲಿ ಚೆಲ್ಲಿ ಬಿಕ್ಕುತ್ತ ದೊಪ್ಪನೆ ನೆಲಕ್ಕೆ ಬಿದ್ದಳು. ಮುಸುಕು ಹಾಕಿಕೊಂಡ ಬೊಮ್ಮಯ್ಯ, ಬಿದ್ದ ಸಪ್ಪಳವನ್ನು ಕೇಳಿ ಗಾಬರಿಯಾಗಿ ಎದ್ದು ಅಂಗಳಕ್ಕೆ ಬಂದು ಪಾರೂನನ್ನು ಎಬ್ಬಿಸಿದನು.

‘ಏಕೆ ಪಾರೂ ಅಳುವೆ? ಏನಾಯಿತು? ಯಾರು ಏನೆಂದರು?’ ಎಂದು ಬೊಮ್ಮಯ್ಯ ಕೇಳಿದನು.

ಸಾವರಿಸಿಕೊಂಡು ಎದ್ದು ಮಾವನಿಗೆ ಏನೂ ಉತ್ತರವನ್ನು ಕೊಡದೆ ನಡುಮನೆಗೆ ಹೋದಳು. ಮಾವನು ಮತ್ತೆ ಕಾರಣವನ್ನು ಕೇಳಿದನು. ತನಗೆ ಏನೂ ತಿಳಿಯದೆಂದು ಹೇಳಿದಳು. ಏಕೆ ತಿರುಗಿ ಬಂದೆನೆಂಬುವದನ್ನು ಹೇಳಲೂ ಕೂಡ ಅವಳಿಗೆ ಅಶಕ್ಯವಾಯಿತು. ಆಕೆಯ ಉದ್ವೇಗದ ಪರಿಸ್ಥಿತಿಯನ್ನು ಕಂಡು ಬೊಮ್ಮಯ್ಯ ಹೆಚ್ಚಾಗಿ ಅವಳನ್ನು ಮಾತನಾಡಿಸಲು ಪ್ರಯತ್ನಿಸಲಿಲ್ಲ. ಬಿದ್ದ ಮೊಟ್ಟೆಯನ್ನು ಎತ್ತಿ ಅಂಗಳದಲ್ಲಿ ಒಂದು ಕಡೆಗಿಟ್ಟನು. ಪಾರೂ ತಲೆ ಹಿಡಿದುಕೊಂಡು ನಡುಮನೆಯಲ್ಲಿ ಕುಳಿತುಕೊಂಡಳು. ಏನೂ ತೋಚದೆ ಸುಮ್ಮನಾಗಿ ಬೊಮ್ಮಯ್ಯ ನಡುಮನೆಯ ಬಾಗಿಲದ ಹೊರಗೆ ನಿಂತುಕೊಂಡನು. ಮಾವನು ಎದುರಿಗೆ ನಿಂತ ಅರಿವೂ ಅವಳಿಗಿದ್ದಿಲ್ಲ.

'ಏನು ಬೊಮ್ಮಯ್ಯನವರೇ' ಎಂದು ಯಾರೋ ಹೊರಗಿನಿಂದ ಕೂಗಿದಂತಾಯಿತು. ಹಿಂದೆ ತಿರುಗಿ ನೋಡಿದ. ಪಾರೂನ ತಾಯಿ ನಾಲ್ಕಾರು ಜನರನ್ನು ಕಟ್ಟಿಕೊಂಡು ಹೊಸ್ತಿಲದ ಹೊರಗೆ ನಿಂತದ್ದು ಕಂಡನು. ನಿಂತಲ್ಲಿಯೇ ಅವರನ್ನು ಒಳಗೆ ಬರಮಾಡಿಕೊಂಡನು ಬೊಮ್ಮಯ್ಯ.

ಪಾರ್ವತಿಯ ತಾಯಿಯ ಹೆಸರು ಮಾರೆವ್ವ. ಅವಳ ಊರಲ್ಲಿ ಎಲ್ಲರೂ ಮಾರಿ ಎಂದು ಆಕೆಯನ್ನು ಕರೆಯುವ ರೂಢಿಯೇ ಬಹಳ. ಅವಳಾದರೂ ಕರೆಯುವ ಹೆಸರಿಗೆ ಅನುರೂಪಳಾಗಿದ್ದಳು. ನಾರಿಯಾಗಿ ಸಮ ನಡೆಯದಿದ್ದವಳೇ ಮಾರಿ ಅಂಬುವದನ್ನು ಆಕೆ ತನ್ನ ನಡೆನುಡಿಯಿಂದ ನಿದರ್ಶನಕ್ಕೆ ತಂದು ಕೊಡುತ್ತಿದ್ದಳು. ಒಂದು ಸೋಜಿಗದ ಸಂಗತಿಯೆಂದರೆ ಮಾರೆವ್ವಳ ರೂಪ ಬಲು ಮುದ್ದು. ನಾಲವತ್ತು ವರುಷ ಮಿಕ್ಕಿದರೂ ಆಕೆ ಪುಟಿಚೆಂಡಿನಂತೆ ಕುಣಿಯುತ್ತಿದ್ದಳು.

'ಬರಬೇಕು; ಬರಬೇಕು; ಮಾರೆವ್ವನವರು ಮೇಲಕ್ಕೆ ಬರಬೇಕು' ಎಂದು ಬೊಮ್ಮಯ್ಯ ಅವಳಿಗೆ ಕೈಮುಗಿದು ಹೇಳಿದನು.

ಮಾರೆವ್ವ ತನ್ನ ಸಂಗಡಿಗರನ್ನು ಕರೆದುಕೊಂಡು ಪಡಸಾಲೆಯಲ್ಲಿ ಬಂದು ಕುಳಿತುಕೊಳ್ಳುತ್ತ 'ಪಾರು ಕಾಣಿಸುವದಿಲ್ಲ' ಎಂದು ಅಟ್ಟಹಾಸದಿಂದ ಬೊಮ್ಮಯ್ಯನಿಗೆ ಕೇಳಿದಳು. ವೈದ್ಯರಲ್ಲಿ ಸ್ವಾಸ್ಥ್ಯವಿಲ್ಲದ ಮೂಲಕ

ಪಾರೂ ಒಳಗೆ ಒರಗಿರುವಳೆಂದು ಆತ ಹೇಳಿದ. ದೇಹದಲ್ಲಿ ಯೌವನದ ಝುರಿಯು ಪ್ರಚಂಡ ಪ್ರವಾಹವಾಗಿ ಹರಿದು ಲಾವಣ್ಯವುಯು ರೂಪ ಕೊಟ್ಟರೂ ಅದರ ಉಪಯೋಗವನ್ನು ಸರಿಯಾಗಿ ಮಾಡಿಕೊಳ್ಳದೆ ದಿನಾಲು ಒಂದಿಲ್ಲೊಂದು ನೆವದಿಂದ ನರಳುವ ಹುಡುಗೆಯನ್ನು ನಾ ಕಾಣಲಿಲ್ಲವೆಂದು ಅನ್ನುವ ಅರ್ಥಪೂರಿತವಾದ ನುಡಿಗಳನ್ನ ಮಾರೆಮ್ಮ ನುಡಿದಳು. ಅವಳ ಮಾತುಗಳನ್ನು ಬೊಮ್ಮಯ್ಯ ಕಿವಿಯಲ್ಲಿ ಹಾಕಿಕೊಳ್ಳಲಿಲ್ಲ. ಬಂದ ಕಾರಣ ವೇನೆಂದು ಆತ ಕೇಳಿದ.

'ದೀವಳಿಗಿ ಹಬ್ಬಕ್ಕ ಹುಡುಗಿಯನ್ನ ಕರೆದುಕೊಂಡು ಹೋಗ ಬೇಕೆಂದು ಬಂದ್ಯೆ' ಎಂದು ಮಾರವ್ವ ತಿನೆ ತಿರುಗಿದ ಟೋಪ ಸೆರಗಿನಿಂದ ಮೋರೆಯನ್ನು ಒರಿಸಿಕೊಳ್ಳುತ್ತ ಮಾತನಾಡಿದಳು.

"ಪಾರೂ ನಿಮ್ಮ ಅವ್ವನಿಗೆ ಏನಾದರೂ ಹಾಸಿಕೊಡಿಸು. ಮಾರವ್ವ, ನಿನ್ನ ಮಗಳನ್ನು ಕರೆದುಕೊಂಡು ಹೋಗಲಿಕ್ಕೆ ಇಷ್ಟು ಜನರನ್ನೇಕೆ ಕರೆದು ಕೊಂಡು ಬಂದಿರುವಿ." ಎಂದು ಬೊಮ್ಮಯ್ಯ ತನ್ನ ಜೇಬಿನಲ್ಲಿಯ ಬೀಡಿ ಗಳನ್ನು ಹಾಗೂ ದೀಪದ ಪೆಟ್ಟಿಗೆಯನ್ನು ಅವರ ಸಂಗಡಿಗರ ಮುಂದೆ ಇಟ್ಟು ಮಾತನಾಡಿದನು.

'ಪಂಚಮೀಗೆ ಕಳಸತೀನಿ ಅಂತ ಹೇಳಿದವ ನೀ ಕಳಿಸಲಿಲ್ಲ;'

'ಹೌದು ನಮ್ಮ ಮನ್ಯಾಗಾರೆ ಯಾರು ಮಾಡವರು ಇದ್ದಾರ. ಅದಕ ಪಾರೂನ ಕಳಿಸಲಿಲ್ಲ.'

'ಈ ಹಟ್ಟೀ ಹಬ್ಬಕ್ಕೆ ಆದರೂ ಕಳಿಸಿ ಕೊಡು.'

'ಹಟ್ಟೀ ಹಬ್ಬಕ!'

'ಯಾಕ ಬಹಳ ದನೀ ಎಳೆದು, ಮೂಗು ಮುರಿದು ಮಾತಾಡತೀದಿ; ಕಳಿಸಿ ಕೊಡುವ ಲಕ್ಷಣ ಇಲ್ಲೇನು.'

'ಈಗ ಬಂದೀದಿ. ಇಗ್ಯಾಕೆ ಅದರ ಮಾತು. ಊಟಾ ಉಡಿಗಿ ಆಗಲಿ. ಮುಂದೆ ಮಾತಾಡೋಣ. ಕುದುರಿ ಹತ್ತಿ ಬಂದವರ್‍ಹಾಗೆ ಮಾಡ ಬೇಡಮ್ಮ ಮಾರವ್ವ' ಎಂದು ಬೊಮ್ಮಯ್ಯ ಅವಳಿಗೆ ಹೇಳಿದನು.

'ಪಾರೂನ ಕರೆದುಕೊಂಡೇ ಊರಿಗೆ ಹೋಗಿ ಊಟಮಾಡ ಬೇಕಂತ ಮಾಡೀನಿ.'

‘ಇಷ್ಟೇಕ ಅವಸರ? ಒಂದು ದಿನ ಇದ್ದು ಹೋಗು. ಬಂದ ಕೂಡಲೇ ಹೊರಡುವ ಪ್ರಸ್ತಾಪ ಯಾಕ?’

‘ಬರೇ ಇದೇ ಮಾತು ಆತು. ಕಳಿಸಿ ಕೊಡುವ ಮಾತೇ ಹೊರಡ ಲೊಲ್ಲದು’

‘ಅವಳ ಗಂಡನನ್ನು ಕೇಳಿ ನಾ ಏನೆಂಬುವದು ಹೇಳತೀನಿ, ಅವನ ಕೇಳದೆ ನನಗೆ ಹೇಳಲಿಕ್ಕೆ ಹೇಗೆ ಬರುವದು?’

ಪಾರು ನಡುಮನೆಯಲ್ಲಿ ಈ ಎಲ್ಲ ಮಾತುಗಳನ್ನು ಕೇಳುತ್ತ ಕುಳಿತು ಕೊಂಡಿದ್ದಳು. ತಾಯಿಯು ತವರು ಮನೆಗೆ ತನ್ನನ್ನು ಕರೆಯಲು ಬಂದಿರುವ ಳೆಂಬ ಕರುಣೆಯಿಂದಾಗಲಿ ಇಲ್ಲವೆ ಮಮತೆಯಿಂದಾಗಲಿ ಅವಳೇನು ಹೊರಗೆ ಬಂದು ತಾಯಿಯ ದರುಶನವನ್ನು ತೆಗೆದುಕೊಳ್ಳಲಿಲ್ಲ. ಮಾರಿಯ ಮಾತು ಒಂದೊಂದು ಪಾರೂನ ಕಿವಿಗೆ ಬಿದ್ದಂತೆ ಅವಳ ಮನಸ್ಸಿನಲ್ಲಿ ಕಸಿವಿಸಿಯಾಗಹತ್ತಿತು. ಮುಂದಿನ ಮುಕ್ತಿಗಿಂತ ಇಂದಿನ ಭುಕ್ತಿ ಲೇಸೆಂದು ನುಡಿಯುವ ತಾಯಿಯು ಪಾರೂ ಇವಳಿಗೆ ಕಡೆಗಾಲದ ಮಾರಿಯ ಮೂರ್ತಿಯಂತೆ ಭಾಸವಾಗಹತ್ತಿದಳು.

‘ಮನೆಯಲ್ಲಿಯ ಮುದುಕ ಆತನೋ ನೀನೋ,’ ಎಂದು ಮಾರಿ ಕೇಳಿದಳು.

‘ನಾ ಬರೇ ಮುದುಕನಾದರೆ ಏನಾಯಿತು. ಮನೆಯ ಎಲ್ಲ ಪ್ರಪಂಚ ವನ್ನು ಸಾಗಿಸತಕ್ಕವ ಶಂಕರೂ. ಆತನನ್ನು ಕೇಳದೆ ನಾನೇನು ಹೇಳಲಿ?’

‘ಇದು ಬರೇ ಕುಂಟನ್ಯಾಯ. ಕಳಿಸಿಕೊಡಬಾರದೆಂದು ಮನಸ್ಸಿನಲ್ಲಿ’

‘ನನ್ನ ಮನಸ್ಸಿನಲ್ಲಿ ಏನೂ ಇಲ್ಲ.’

‘ಅಂದರೆ’

‘ಕಳಿಸುವದರ ಸಲುವಾಗಿ ನಾನು ಏನೂ ವಿಚಾರಮಾಡಲು ಶಕ್ಯವಿಲ್ಲ. ಇಂದು ಶಂಕರು ನನ್ನ ಸಂಗಡ ಬಡಿದಾಡಿ ಮನೆಬಿಟ್ಟು ಹೊರಗೆ ಹೋಗಿರುವನು. ಇಂದು ನನ್ನ ಮನಸ್ಸು ನೆಟ್ಟಗಿಲ್ಲ. ದಯಮಾಡಿ ಇದನ್ನು ನಾಳೆ ವಿಚಾರ ಮಾಡೋಣ’ ಎಂದು ದೊಡ್ಡಯ್ಯ ಬಹು ದೈನ್ಯದಿಂದ ಹೇಳಿಕೊಂಡನು.

ತಾನು ಮಾಡಿಸಿದ ಮದ್ದು ತಂದೆ–ಮಗನಿಗೂ ತಿಳಿಯುವೆ ಸದ್ದಿಲ್ಲದೆ ನಾಟಿರುವದೆಂದು ಮಾರಿ ಮನದಲ್ಲಿ ಹಿರಿ ಹಿರಿ ಹಿಗ್ಗಿದಳು.

' ಶಂಕರೂ ನಿಮ್ಮ ಸಂಗಡ ಬಡಿದಾಡಿದನೇ! ಬಹಳ ಆಶ್ಚರ್ಯ! '

' ನನಗಾದರೂ ಆಶ್ಚರ್ಯವಾಗಿರುವದು. ನನ್ನ ಎದುರಿಗೆ ನಿಂತು ಎಂದೂ ಮಾತನಾಡಿದವನಲ್ಲ. ನಾ ಹೇಳಿದ್ದಕ್ಕೆಲ್ಲ ಆತ ತಲೆಬಗ್ಗಿಸುತ್ತಿದ್ದ. ಅಂತಹವನು ಇಂದು ಹೊಲೆಯನ ಹಾಗೆ ಬಡಿದಾಡಿದ. '

' ಮನೆ ಬಿಟ್ಟು ಹೋದನೇಕೆ? ' ಎಂದು ಮಾರಿ ಕೇಳಿದಳು.

' ಏಕೋ ಹೋದ ' ಎಂದು ಬೊಮ್ಮಯ್ಯ ಉತ್ತರ ಕೊಟ್ಟ.

' ಪಾರೀ ಗಂಡಗ ಬುದ್ಧಿ ಹೇಳಲಿಲ್ಲವೇ? ' ಎಂದು ಮಾರಿ ನುಡಿದಳು.

' ತಂದೆ ಮಗನ ನ್ಯಾಯದಲ್ಲಿ ಅವಳೇನು ಹೇಳಬೇಕು? ' ಎಂದು ಬೊಮ್ಮಯ್ಯ ಉಸರುಗರೆದು ಹೇಳಿದ.

' ಗಂಡಗ ಹೆಂಡತಿ ಹೇಳಬೇಕು. '

' ಇಂದು ಆ ಮಾತೇ ಬೇಡ ಮಾರೆಮ್ಮ. ನಾಳೆ ವಿಚಾರ ಮಾಡೋಣ. ಶಂಕರು ಬರಲಿ. ಆತನನ್ನು ಕೇಳಿ ನಾ ಏನೆಂಬುದನ್ನು ಹೇಳತೀನಿ'

ಮಾರಿಯ ಜತೆಯಲ್ಲಿ ಬಂದ ಬೀರಪ್ಪ ಚಿಲುಮೆಯನ್ನು ಹೊತ್ತಿಸುತ್ತ ' ಅಲ್ಲ ಬೊಮ್ಮಪ್ಪ, ನಿನಗ್ಹ್ಯಾಂಗ ಮಗನ ಸಲುವಾಗಿ ಕರಳದ ಹಾಂಗೇ ಮಾರೆಮ್ಮಗ ಮಗಳ ಸಲುವಾಗಿ ಕರಳು ಇಲ್ಲೇನು? ' ಎಂದು ನುಡಿದನು.

' ಎಲ್ಲಾ ತಾಯಿತಂದಿಗೂ ತಮ್ಮ ಮಕ್ಕಳ ಸಲುವಾಗಿ ಕರಳ ಇರತದ ' ಎಂದು ಬೊಮ್ಮಯ್ಯ ಹೇಳಿದ.

' ಹಟ್ಟೀ ಹಬ್ಬಕ್ಕ ಮಗಳ್ನ ಕರೀಲಿಕ್ಕ ಬಂದಾಳ ಕಳಿಸಿಕೊಟ್ಟು ಬಿಡು. ಹಬ್ಬ ಮುಗಿದ ಕೂಡಲೇ ಪರ್ತ ಕರಕೊಂಡು ಬಾ. ಪಂಚಮೀಗೂ ಕಳಿಸಲಿಲ್ಲ ಅಂತ ' ಎಂದು ಬೀರಪ್ಪ ಪಡಸಾಲೆಯನ್ನು ಚಿಲುಮೆಯ ಹೊಗೆಯಿಂದ ಮುಸುಕಿಸಿ ಮಾತನಾಡಿದನು.

' ಶಂಕರೂ ಬರದೆ ಹೊರ್ತು ನಾ ಏನೂ ಹೇಳೊದುಲ್ಲ. ಸುಮ್ಮನೆ ಇರತಿದ್ದರ ಇರ್ರಿ. ಇಲ್ಲದಿದ್ದರೆ ಹಾದೀ ಹಿಡಿದು ತಿರುಗಿ ಹೋಗರಿ ' ಎಂದು ಬೊಮ್ಮಯ್ಯ ಉತ್ತರ ಕೊಟ್ಟ.

‘ ನೀ ಅಂತೀ ಅಂತ ನಾ ಮಂದೀನ್ನ ಕರಕೊಂಡು ಬಂದೀನಿ ’ ಎಂದು ಮಾರಿ ಜಗಿದು ಕುಳಿತು ಮಾತನಾಡಿದಳು.

‘ ಏನು ಪಾರೂನ್ನ ಎಳೆದುಕೊಂಡು ಹೋಗತೀಯಾ. ’

‘ ಎಳೆದುಕೊಂಡು ಯಾಕ ಹೊತ್ತುಕೊಂಡು ಹೋಗತೀವಿ ’

‘ ಅಬ್ಬ ನಮ್ಮ ಮನಿಯ್ಯಾಗ ಬಂದು ಎಷ್ಟು ಸಿಸ್ನ ಅಬ್ಬರ. ನಮ ವಸ್ತು ನೀ ಕಸಕೊಂಡು ಹೋಗತೀಯಾ? ಅಬ್ಬ! ಚಲೋ ಗಂಡರಾವಿ ಇದ್ದೀಯಲ್ಲ ’ ಎಂದು ಬೊಮ್ಮಯ್ಯ ಸಿಟ್ಟಿನಿಂದ ನುಡಿದನು.

‘ ನಾಲಿಗೆ ಬಿಗಿಹಿಡಿಯೋ ಗೊಮ್ಮ. ಬಹಳ ಉದ್ದ ಮಾಡಲಿಕ್ಕ ಹತ್ತೀದಿ. ಸ್ವಲ್ಪ ಕತ್ತರಿಸಲೇನು ? ’ ಎಂದು ಬೇರಪ್ಪ ಅಂದನು.

ಬೇರಪ್ಪನ ಮಾತು ಕೇಳಿ ಬೊಮ್ಮಯ್ಯ ಬಹಳೇ ರೇಗಿದ, ಸಿಟ್ಟು ಬಹಳೇ ಏರಿದ್ದರಿಂದ ನಾಲಿಗೆಯನ್ನು ಬಿಗಿಹಿಡಿದ. ಐದು ನಿಮಿಷ ತಲೆ ಹಿಡಿದುಕೊಂಡು ಕುಳಿತನು.

‘ ಏ ಪಾರೀ ಎಲ್ಲಿ ಇದ್ದೀದಿ ಹೊರಗ ಬಾ. ’ ಎಂದು ಮಾರಿ ಬಾಯಿ ತುಂಬಾ ತೆಗೆದು ಒದರಿ ಅಂದಳು.

ತಾಯಿಯ ಕೂಗನ್ನು ಪಾರೂ ಕೇಳಿದರೂ ನಡುಮನೆಯಿಂದ ಹೊರಗೆ ಕಾಲಿಡಲಿಲ್ಲ. ತಾಯಿ ಮಾರಿಯಾದರೆ ಮಗಳೆಲ್ಲಿ ಹೋಗಬೇಕೆಂದು ಮನದಲ್ಲಿ ಅಂದುಕೊಂಡಳು. ಸೊಗಸಿನ ಬಾಳುವೆಯನ್ನು ಹಾಳು ಮಾಡಲು ಮಾರಮ್ಮ ಬಂದಿರುವಳೆಂದು ಪಾರು ಹೇಗೋ ಮನಸ್ಸಿಗೆ ಅನಿಸಿದ್ದರಿಂದ ಮಿಡುಕಿದಳು.

‘ ನಾ ಸೊಸೆಯನ್ನು ಕಳಿಸಿಕೊಡುವದಿಲ್ಲ. ನೀವೆಲ್ಲರೂ ಮನೀ ಬಿಟ್ಟು ಹೊರಗೆ ಹೋಗಬೇಕು ಮನೆಯಲ್ಲಿ ನೀವು ಗದ್ದಲ ಮಾಡಿದರೆ ನಿಮ ಟೊಂಕವನ್ನು ಮುರಿಯುವೆ ’ ಎಂದು ಬೊಮ್ಮಯ್ಯ ಎಂದೂ ನುಡಿಯಲಾರದವ ನುಡಿದ.

ಬೇರಪ್ಪ ಅಂಗಿಯ ತೋಳುಗಳನ್ನು ಏರಿಸಿ ಬೊಮ್ಮಯ್ಯನನ್ನು ಹೊಡೆಯಲು ಸಿದ್ಧನಾಗಿ ನಿಂತು ಮಾರಿಯ ಉತ್ತರವನ್ನೇ ಆತ ನಿರೀಕ್ಷಿಸುತ್ತಿದ್ದ. ಅವಳ ಬಾಯಿಂದ ಮಾತು ಉದುರಿದೊಡನೆ ಬೊಮ್ಮಯ್ಯನ

ತಲೆಯನ್ನು ಸೀಳಬೇಕೆಂದು ಮಾಡಿದ್ದ. ತನ್ನೆದೆಯ ಕುಪ್ಪಸದಲ್ಲಿ ಕೈಹಾಕಿ ನೋಡಿಕೊಂಡು ಪಾರಿ ನಗುತ್ತ ಕುಳಿತುಕೊಂಡಳು.

'ನನ್ನ ಪ್ರಾಣ ಹೋದರೂ ಇಂದು ಪಾರೂನ್ನ ಕಳಿಸುವದಿಲ್ಲ' ಎಂದು ಬೊಮ್ಮಯ್ಯ ಆ ಬಂದ ಜನರಿಗೆ ಹೇಳಿದ.

ಇಷ್ಟರಲ್ಲಿಯೇ ಶಂಕರನು ಮನಸ್ಸಿಗೆ ಬಹಳೇ ಕೆಡಕೆನಿಸಿದ್ದರಿಂದ ತಿರುಗಿ ಮನೆಗೆ ಬಂದನು. ಮನೆಯಲ್ಲಿ ಅಪಲಕ್ಷಣ ಮುಖಗಳು ಕೂಡಿದ್ದು ನೋಡಿ ಗಾಬರಿಯಿಂದಲೇ ಪಡಸಾಲೆಗೆ ಬಂದನು. ತಂದೆಯ ಗಂಭೀರ ಮುಖಚರ್ಯೆಯನ್ನು ಕಂಡನು. ಕೋಳೇರಿಸಿಕೊಂಡು ನಿಂತ ಬೀರಪ್ಪನನ್ನು ನೋಡಿ 'ಏಕೆ ಹೀಗೆ ನಿಂತದ್ದು' ಎಂದು ಕೇಳಿದನು.

'ಶಂಕರು ಬಂದನು ಬೊಮ್ಮಯ್ಯ. ಆತನನ್ನು ಕೇಳಿ ಇನ್ನು ಮೇಲಾದರೂ ಪಾರೂನನ್ನು ಹಟ್ಟಿಯ ಹಬ್ಬಕ್ಕೆ ಕಳಿಸು' ಎಂದು ಮಾರಿ ಮೂಗು ಮುರಿಯುತ್ತ ಮುಗುಳು ನಗೆಯಿಂದ ಮಾತನಾಡಿದಳು.

'ಅವಳನ್ನು ಈಗ ಕಳಿಸೂದಿಲ್ಲ. ಅಪ್ಪ ಇದನ್ನೇ ಹೇಳಿರಬೇಕು' ಎಂದು ಶಂಕರು ಉತ್ತರ ಕೊಟ್ಟನು.

'ತಾಯಿಯ ಕರಳು ಕೊಯ್ಯಬೇಡ ಶಂಕರೂ, ನೀನೂ ಬೇಕಾದರೆ ಹಬ್ಬಕ್ಕೆ ಪಾರೀ ಸಂಗಡ ನಮ್ಮ ಮನೆಗೆ ನಡೆ' ಎಂದು ಮಾರಿ ನುಡಿದಳು.

'ಅವರು ಕಳಿಸಿದರೂ ನಾನು ಬರುವದಿಲ್ಲ' ಎಂದು ಪಾರೂ ಮೆಲ್ಲಗೆ ಉಸುರಿದಳು.

ಶಂಕರನು ಮಾತ್ರ ಇದನ್ನು ಕೇಳದನು. ಉಳಿದವರಿಗೆ ಕೇಳಿಸಿತೋ ಇಲ್ಲೋ. ಹೆಂಡತಿಯ ಮನದಿಂಗಿತವನ್ನು ಕಂಡು ಹಿಡಿದು ತಾವು ಈ ಸಂದರ್ಭದಲ್ಲಿ ಉತ್ತರ ಕೊಟ್ಟು ಮಾತಿಗೆ ಮಾತು ಬೆಳಿಸಿ ಮನಸು ಕಹಿ ಮಾಡಿಕೊಂಬುವದು ಒಳಿತಲ್ಲವೆಂದು ಶಂಕರನು ತಿಳಿದುಕೊಂಡು 'ಮಾರಮ್ಮಾ ನಮ್ಮದೇನೂ ಅಡ್ಡಿಯಿಲ್ಲ ಅವಳು ಬರಲಿಕ್ಕೆ ಒಪ್ಪಿದರೆ' ಎಂದು ಹೇಳಿದನು.

'ಏ ಪಾರೀ ಏನಂತಿಯೇ ಇಲ್ಲಿ ಬಾ' ಎಂದು ಮಾರಿ ಅಂದಳು.

‘ಎಷ್ಟಾದರೂ ಪೋರಿ ಆದರೇನು ತಿಳೀತದ. ಎಳೆದುಕೊಂಡು ನಡೆ’ ಎಂದು ಬೀರಪ್ಪ ಮಾರಮ್ಮನಿಗೆ ಚೀರಿದನು.

ಪಾರೂ ಎಲ್ಲಕ್ಕೂ ಉತ್ತರವನ್ನು ಕೊಡಲಿಲ್ಲ. ಸುಮ್ಮನೆ ನಡುಮನೆಯಲ್ಲಿ ಕುಳಿತಿದ್ದಳು. ಅರ್ಧ ರಾತ್ರಿಯಲ್ಲಿ ಕೊಡೆ ಹಿಡಿದುಕೊಂಡು ಮಾತನಾಡುವವನಂತೆ ಬೀರಪ್ಪ ನೀರಿಲ್ಲದ ಮಾತನ್ನಾಡಿದ್ದು ಕೇಳಿ ಶಂಕರನು ಮನಸದಲ್ಲಿ ಸಿಡಿಮಿಡಿಗೊಂಡ. ಮನೆಗೆ ಬಂದವನನ್ನು ಅವಮಾನ ಮಾಡಿ ಕಳಿಸುವದು ಮನೆತನದ ಲಕ್ಷಣವಲ್ಲೆಂದು ಬಂದ ಸಿಟ್ಟನ್ನು ನುಂಗಿಕೊಂಡನು.

‘ಬೇಕಾದರೆ ಪಾರೂನನ್ನು ಇನ್ನೊಮ್ಮೆ ಕೇಳು ಮಾರಮ್ಮ’ ಎಂದು ಶಂಕರನು ಹೇಳಿದನು.

ಬೊಮ್ಮಯ್ಯ ನಡುವೆ ಏನೂ ಮಾತನಾಡಲಿಲ್ಲ.

‘ನಿನ್ನ ಹೆಂಡತಿಯು ಎಲ್ಲಿರುವಳೋ ನನಗೆ ಗೊತ್ತಿಲ್ಲ.’

‘ಹೆಂಗಸರು ಇರತಕ್ಕಲ್ಲಿಯೇ ಇರುವಳು. ಪಾರೂ ಹೊರಗೆ ಬಾ’ ಎಂದು ಶಂಕರನು ನುಡಿದನು.

ಶಂಕರನ ನುಡಿಯನ್ನು ನೋಡಿ ಪಾರೂ ಹೊರಗೆ ಬಂದು ಹೆತ್ತ ತಾಯಿಯ ಮೊಗವನ್ನು ನೋಡಬೇಕೋ ಇಲ್ಲವೆ ಮೌನವ್ರತ ಧಾರಣ ಮಾಡಿಕೊಂಡು ನಡುಮನೆಯಲ್ಲಿಯೇ ಕುಳಿತುಕೊಳ್ಳಬೇಕೋ ಎಂಬ ಸಮಸ್ಯೆಯಲ್ಲಿ ಆಕೆ ಸಿಲುಕಿದಳು. ತಾನು ಯೌವನದ ಮನೆಯಲ್ಲಿ ಕಾಲಿಡುತ್ತಲೇ ಕೌಮಾರ್ಯಾವಸ್ಥೆಯಲ್ಲಿಯೇ ತನ್ನ ರೂಪವನ್ನು ಹರಿಯದ ಮಿಂಡರಿಗೆ ಎಡೆಯಾಗಿ ಕೊಡಬೇಕೆಂದು ತಾಯಿಯಾದ ಮಾರಿಯು ಪ್ರಯತ್ನಿಸಿದ್ದು ಪಾರ್ವತಿಯ ನೆನಪಿಗೆ ಬಂದಿತು. ಒಂದಲ್ಲ ಎರಡಲ್ಲ, ನೂರಾರು ಜನಗಳೊಂದಿಗೆ ಪರಿಚಯದ ಪಾರ್ವತಿಯಾಗಬೇಕೆಂದು ಹವಣಿಸಿದ್ದು ಅವಳ ಸ್ಮೃತಿ ಪಥದಲ್ಲಿ ಸುಳಿಯಹತ್ತಿತು. ಮುಂದಿನ ಮುಕ್ತಿಗಿಂತ ಇಂದಿನ ಭುಕ್ತಿಯಿಂದಾಗುವ ಆನಂದ ಪಡೆಯುವದೇ ಮಾರಿಯು ಜೀವನದುಸಿರಾಗಿದ್ದುದು ಮಗಳಿಗೆ ಚನ್ನಾಗಿ ಗೊತ್ತಿತ್ತು. ಮದುವೆಯ ಪೂರ್ವದಲ್ಲಿ ಎದುರಿಗೆ ನಿಂತು ತಾಯಿಯ ಫಡಾವಳಿಯನ್ನು ಖಂಡಿಸುವಷ್ಟು,

ಧೈರ್ಯ ಪಾರ್ವತಿಯಲ್ಲಿ ಇದ್ದಿಲ್ಲ. ವೈಸೆರಿಯುದ ಪೂರ್ವದಕ್ಷೆಯ ಚಿಕ್ಕಂದಿನ ಚೆಲ್ಲಾಟತನದಲ್ಲಿ ತಾಯಿಯು ತನ್ನ ನಡೆನುಡಿಗಳಿಂದಲೂ ಹಾತೊರೆಯುತ್ತಿರುವ ವಿಟಪುರುಷರ ಹಾವಭಾವಗಳಿಂದಲೂ ಕಲಿಸುತ್ತಿದ್ದ ನಡಾವಳಿಯು ಪಾರ್ವತಿಗೆ ಹೇಯ ಅನಿಸದಿದ್ದರೂ ಅದರಲ್ಲಿಯೇ ಜೀವನವನ್ನು ಸಾಗಿಸಬೇಕೆಂಬ ಉತ್ಸುಕತೆ ಅವಳಿಗನಿಸಲಿಲ್ಲ. ಅದೊಂದು ಅವಳಿಗೆ ಹುಡುಗರ ಆಟವಾಗಿತ್ತು. ಮಗಳ ಮದುವೆಯನ್ನು ಮಾಡದೆ ಪಾರ್ವತಿಯನ್ನು ಬಸವಿತನಕ್ಕೆ ಹಚ್ಚುವಷ್ಟು ಧೈರ್ಯ ಮಾರಿಯಲ್ಲಿ ಸರಿಯಾಗಿದ್ದಿಲ್ಲ. ಗಂಡನ ನಾಮಧಾರಣೆಯ ಮುಸುಕಿನಲ್ಲಿ ಮಗಳು ತನ್ನ ಹಾದಿಯನ್ನೇ ತುಳಿಯಬೇಕೆಂಬ ಆಸೆ ಮಾರಿಯಲ್ಲಿತ್ತು. ಅವಳ ಹಳ್ಳಿಯಲ್ಲಿ ಆಕೆಯ ಜಾಲದಲ್ಲಿ ಸಿಲುಕದವರು ಯಾರೂ ಇದ್ದಿಲ್ಲ. ತನ್ನ ರೂಪದ ಸೂರೆಯಿಂದ ಆಕೆ ಊರಲ್ಲಿ ಎಲ್ಲರಿಗೂ ಗಂಡು ಮೀರಿದ್ದಳು. ಮಾರಿಯನ್ನು ಕಂಡರೆ ಪಾರ್ವತಿಯಲ್ಲಿ ಮತಿಭ್ರಮವಾಗುವ ಬೇನೆಯೊಂದು ಸೇರಿತ್ತು. ಮೈ ನಡುಗಿ, ಬೆವತು ಜೀವನದ ಸತ್ವವೆಲ್ಲಾ ಹರಿದು ಹೋಗುತ್ತಿತ್ತು. ಇದು ಪಾರ್ವತಿಗೆ ಗೊತ್ತಿತ್ತು. ಇದನ್ನು ಬೊಮ್ಮಯ್ಯ ಅರಿಯನು. ಶಂಕರನಿಗೆ ಗೊತ್ತಿದ್ದರೂ ಅದರ ಕಾರಣವು ಆತನಿಗೆ ಹೊಳೆಯಲಿಲ್ಲ. ಕೆಲವು ಸಲ ತಾನು ಒಂದು ವಿಶಿಷ್ಟ ಮುಖಚರ್ಯವನ್ನು ಮಾಡಿದರೆ ಪಾರ್ವತಿಯು ಮತಿಗೆಟ್ಟು ನಡೆದದ್ದು ಆತನಿಗೆ ಗೊತ್ತಿತ್ತು.

ಪಾರೂ ಹೊರಗೆ ಬರಲು ತಡಮಾಡಿದ್ದರಿಂದ ಶಂಕರನು 'ಪಾರೂ ಹೊರಗೆ ಬಾ, ನಿನ್ನ ತಾಯಿ ನಿನ್ನನ್ನು ಮಾತನಾಡಿಸಿ ಹೋಗುವಳಂತೆ' ಎಂದು ಹೆಂಡತಿಗೆ ಕೇಳಿಸುವಂತೆ ನುಡಿದನು.

ಪಾರ್ವತಿ ತಲೆಯ ಮೇಲಿನ ಸೆರಗನ್ನು ಸರಿಪಡಿಸಿಕೊಳ್ಳುತ್ತ ಮೆಲ್ಲಗೆ ನಡುಮನೆಯಿಂದ ಹೊರಗೆ ಬಂದಳು. ಯೌವನದ ಹುರುಪು; ಜೀವನದ ಬದುಕಿನ ಆನಂದ; ಒಗೆತನದಿಂದ ಲಭಿಸಿದ ಸಂತೋಷ–ಇವುಗಳ ಸಮೀಕರಣದಿಂದ ಬಟ್ಟು ಕಚ್ಚುವ ಅವಳ ರೂಪಕ್ಕೆ ಪುಟಹಾಕಿದಂತಾಗಿತ್ತು. ಬಳುಕುವ ದೇಹಕ್ಕೆ ನೋಡುವವರ ಮನವನ್ನು ಕಳ್ಳಿಸುವ ಸೊಗ. ಹಣೆಯ ಮೇಲಿನ ಕುಂಕುಮದ ಕೆಳಗಿದ್ದ ಹಚ್ಚೆಯ ಬಟ್ಟು, ಕಂಠದ

ಹೃದಯ.ದಲ್ಲಿ ಹಣತೊಟ್ಟು ಅವಳ ರೂಪ ಪಡೆಯಬೇಕೆಂಬ ಆಶೆ ಅಂಕುರಿಸುವದು. ಪಾರಿ ಅರಳಿದ ಮಗಳ ರೂಪವನ್ನು ಕಂಡಳು. ತನ್ನ ಸೊತ್ತಿಗೆ ಮೂಲಾಧಾರವಾಗುವದೆಂದು ಅಂದುಕೊಂಡಳು. ಈ ಪಾರ್ವತಿಯ ರೂಪವನ್ನು ಕಂಡು ಬೀರಪ್ಪ ಬಾಯಿ ತೆಗೆದು ಕುಳಿತುಕೊಂಡನು. 'ಹರೇ ಇದ್ದಾಗ ನೀ ಹಿಂಗೇ ಇದ್ದೀಯೇನ ಪಾರೀ' ಎಂದು ಬೀರಪ್ಪ ಕೇಳಿದನು.

'ವಯಸ್ಸು ಬಂದರೆ ಶಕ್ತಿಯೂ ಮುಂದಿಯಾಗುವದು' ಎಂದು ಪಾರಿ ಅಂದಳು.

'ಇದು ನನಗೆ ಗೊತ್ತಿಲ್ಲ' ಎಂದು ಬೀರಪ್ಪ ತಲೆ ಅಲ್ಲಾಡಿಸಿದ

'ಪಾರೀ, ಹಬ್ಬಕ್ಕೆ ಕರಿಯಲಿಕ್ಕೆ ಬಂದೀನಿ.'

ಪಾರೂ ಕೆಳಗಿಟ್ಟ ಕಣ್ಣು ಮೇಲಕ್ಕೆ ಮಾಡಲಿಲ್ಲ ಕೊಟ್ಟ ಮನೆಗೆ ಹೆಣ್ಣು ಹಳ್ಳ ಎಂಬುದನ್ನು ಆಕೆ ತಾಯಿಗೆ ಹೇಳಿದಳು.

'ತಾಯೀ ಮರೆತೇನು ಹಬ್ಬಕ್ಕೆ ಒಮ್ಮೆ ಬಂದು ಹೋಗು. ನಿನಗೆ ತಾಯಿ ಒಬ್ಬಳೇ ಇರುವಳು; ಆದರೆ ನಿನಗೆ ನೂರು ಮಂದಿ ಗಂಡಂದಿರು ಸಿಗಬಹುದು. ಇನ್ನೊಬ್ಬ ತಾಯಿ ಸಿಗುವದಿಲ್ಲ' ಎಂದು ಪಾರಿ ಮಗಳಿಗೆ ಹೇಳಿದಳು.

'ನನಗೆ ನೂರಾರು ಮಂದಿ ತಂದೆಯಿರಬಹುದು.'

ಮಗಳ ಚುಚ್ಚಿನ ಮಾತನ್ನು ಕೇಳಿ ಪಾರಿ ಕಣ್ಣು ಕೆರಳಿಸಿ ತಾಯಿಯೆಂಬ ಶಕ್ತಿಯಿಂದ ಪಾರ್ವತಿಯ ಕೆನ್ನೆಗೆ ಬಲವಾಗಿ ಹೊಡೆದಳು. ಪಾರ್ವತಿಯು ಭಯದಿಂದ ನಡುಗಹತ್ತಿದಳು. 'ನಾ ಒಲ್ಲೆ ಇವಳ ಮಾರೀ ನೋಡಲು. ಮತ್ತೆ ನನ್ನನ್ನು ಪರಪುರುಷರ ಸಂತೆಯಲ್ಲಿ ಮಾರಾಟಕ್ಕೆ ಹಚ್ಚುವಳು. ( ಮೊದಲು ಹೊರಗೆ ಹಾಕಿರಿ' ಎಂದು ಅಳುತ್ತ ನಡುಮನೆಯ ಕಡೆಗೆ ತಿರುಗಿದಳು.

'ಹಾದರದ ನಿನ್ನ ಹಡೆದೀನೇನು ?' ಎಂದು ಕೇಳಿದಳು.

ಶಂಕರನು ಸುಮ್ಮನಿದ್ದನು.

ಬೊಮ್ಮಯ್ಯನು ಕಣ್ಣು ಮುಚ್ಚಿಕೊಂಡು ಕುಳಿತನು.

ಬೀರಪ್ಪ ಹೇಸರಿಸುತ್ತ ನೆಲಕೆದರಿದ.

ತನ್ನ ಕುಪ್ಪಸದ ಎದೆಯಲ್ಲಿ ಬಚ್ಚಿಟ್ಟುಕೊಂಡ ಮದ್ದಿನ ಮಾಟವನ್ನು ಯಾರೂ ನೋಡದಂತೆ ಹೊರಗೆ ತೆಗೆದು ಎಡಗೈ ಮುಷ್ಟಿಯಲ್ಲಿ ಹಿಡಿದು ಕೊಂಡು ನಡುಮನೆಗೆ ಹೋಗುತ್ತಿದ್ದ ಪಾರ್ವತಿಯನ್ನು ಬಲಗೈಯಿಂದ ಹಿಡಿದು ನಿಲ್ಲಿಸಿದಳು. ಮಗಳ ಮೊಗವನ್ನು ಐದು ನಿಮಿಷ ದಿಟ್ಟಿಸಿ ನೋಡಿ ದಳು ಪಾರ್ವತಿಯ ಸೆರಗಿಗೆ ತನ್ನ ಮದ್ದಿನ ಮಾಟವನ್ನು ಮಾಡಿದಳು. ಆಳುತ್ತಿದ್ದ ಪಾರ್ವತಿ ಅರೆಹಾಸದಿಂದ ತಾಯಿಯ ಮೊಗವನ್ನು ನೋಡಿದಳು.

ತನ್ನ ಕೆಲಸವಾಯಿತೆಂದು ಮಾರಿ ಮನೆ ಬಿಟ್ಟು ಮಿಂಚಿನಂತೆ ಹೊರಟಳು.

ಪಾರ್ವತಿಯು ಗುಳದಾಳಿಯನ್ನು ಹರಿದು ಚಲ್ಲಿದಳು.

ಬೊಮ್ಮಯ್ಯ ದಿಗಿಲು ಬಡಿದು ಕುಳಿತ.

ಶಂಕರನು ಮಿಟಮಿಟಿ ಸ್ವರ್ಗಕ್ಕೆ ಹೋದ.

ಬೀರಪ್ಪ ಚಿಲುಮೆಯ ಹೊಗೆಯನ್ನು ಬಿಡುತ್ತಿದ.

ಹೊಸ್ತಿಲ ದಾಟಿದಳು ಪಾರ್ವತಿ.

ಮದ್ದಿನ ಮಿಂಡಿಯ ಹಿಂದೆ ಪಾರಿಯಾಗಿ ಮಾಯವಾದಳು.

---

# ಲಗ್ನಲ್ಲ! ದಂತ ಭಗ್ನ!!

ವಿಶ್ವೇಶ್ವರ ಭಟ್ಟರ ಮನಸ್ಸು ಇಂದು ಬಹಳೇ ಉದ್ವಿಗ್ನವಾಗಿತ್ತು. ತಾವು ಕಟ್ಟಿಕೊಂಡ ಆಶಾಗೋಪುರಗಳು ಕುಸಿದು ಬೀಳುವವೆಂಬ ಭಯ. ಕಾಮೇಶ್ವರಿಯು ತನಗೆ ಎದುರುತ್ತರ ಕೊಡುವಳೆಂದು ಆತನಿಗೆ ಕನಸಿನಲ್ಲಿಯೂ ಅನಿಸಿದ್ದಿಲ್ಲ. ಇದೊಂದು ಸಲ ಅವಳು ತಾನು ಹೇಳಿದಂತೆ ವರ್ತಿಸಿದರೆ ಅವಳ ಲಗ್ನದ ಚಿಂತೆ ಹಾಗೂ ತನ್ನ ಜೀವನದ ದುಗುಡು ಕಡಿಯುವವೆಂದು ಆತ ತಿಳಿದುಕೊಂಡಿದ್ದ. ತಾಯಿಯ ಕಡೆಯಿಂದ ಮಗಳಿಗೆ ತಿಳಿಸಿ ಹೇಳಿ ಒತ್ತಾಯ ಪಡಿಸಿದ. ಮಗಳೆದುರಿಗೆ ಅವಳ ಮುಂದಿನ ಐಶ್ವರ್ಯದ ಚಿತ್ರವನ್ನು ಕವಿಗಳಿಗಿಂತ ಮಿಗಿಲಾದ ಶಬ್ದಗಳಾಡಂಬರದಿಂದ ಬಣ್ಣತುಂಬಿ ಚಿತ್ರಿಸಿದ್ದ. ಕಿವಿಯಲ್ಲಿ ಅರಳೆಯನ್ನಿಟ್ಟುಕೊಂಡು ಕೇಳುವವರಂತೆ ಕಾಮೇಶ್ವರಿ ಕುಳಿತು ಕೇಳಿದ್ದು ವಿಶ್ವೇಶ್ವರ ಭಟ್ಟರ ಕಣ್ಣೆದುರಿಗೆ ಇನ್ನೂ ಕಟ್ಟಿದಂತಾಗಿತ್ತು. ವಿಭ್ರಮ ಬುದ್ಧಿಯಾದವರಂತೆ ಎಲ್ಲ ಮಾತುಗಳನ್ನು ಕೇಳಿ ಶೂನ್ಯ ಮನಸ್ಕಳಾದದ್ದನ್ನು ನೋಡಿದ್ದ. ಎದ್ದು ಎದುರುತ್ತರವನ್ನು ಕೊಟ್ಟು ಹೋದದ್ದೂ ಕಂಡಿದ್ದ.

ಕಾಮೇಶ್ವರಿ ಹುಟ್ಟಿ ಹೊಸೆದಿದ್ದು, ಅಂಬೆಗಾಲನ್ನಿಕ್ಕುತ್ತ ಪಂಚೆಯನ್ನು ಜಗ್ಗಿದ್ದು, ತಪ್ಪು ಹೆಜ್ಜೆಯನ್ನಿಕ್ಕುತ್ತ ಓಡಿಬಂದು ತನ್ನ ಹೆಗಲ ಮೇಲೆ ಕುದುರೆಯಾಗಿ ಕುಳಿತದ್ದು, ಮೊದಲು ನುಡಿಗಳಿಂದ ತನ್ನನ್ನು 'ವಿಶೂ' ಎಂದು ಒದರಿದ್ದು, ಗೆಳತಿಯರೊಡನೆ ನಲಿದು ಕುಣಿದಾಡಿ ಬಂದು ದಿನಚರ್ಯೆಯನ್ನು ಸಂಜೆಯ ಮುಂದೆ ವಿವರಿಸಿದ್ದು, ಪ್ರತಿಯೊಂದು ವರ್ಗದಲ್ಲಿ ಎಲ್ಲರಿಗಿಂತಲೂ ಬುದ್ಧಿಯಲ್ಲಿ ಮುಂದರಿದು ತನಗೆ ಆನಂದವನ್ನು ನೀಡಿದ್ದು, ವಿಶ್ವವಿದ್ಯಾಲಯದ ಪದವೀಧರ ಪರೀಕ್ಷೆಯಲ್ಲಿ ಒಂದನೇ ವರ್ಗದಲ್ಲಿ ಉತ್ತೀರ್ಣಳಾಗಿ ನಲಿದಾಡಿದ್ದು:— ಎಲ್ಲ ಚಿತ್ರಗಳು ವಿಶ್ವೇಶ್ವರ ಭಟ್ಟರ ಕಣ್ಣೆದುರಿಗೆ ಚಲಚ್ಚಿತ್ರಗಳಾಗಿ ನಲಿದವು.

ಅಳಿಯ ಜಿಲ್ಹಾಧಿಕಾರಿ. ಸರಕಾರದ ವಿಶಾಲವಾದ ಬಂಗ್ಲೆ. ಮನೆಯಲ್ಲಿ ಜವಾನರು. ಒಂದು ಬ್ಯೂಕ ಕಾರು. ತನ್ನನ್ನು ಕರೆಯಲು ನಿಲ್ದಾಣಕ್ಕೆ ಅಳಿಯ ಕಾರು ಕಳುಹಿಸಿಕೊಟ್ಟಿದ್ದ. ಎಲ್ಲ ಜವಾನರು ರೈಲು ಇಳಿಯುತ್ತಲೇ ತನ್ನ ಎಲ್ಲ ಸಾಮಾನುಗಳನ್ನು ಎತ್ತಿಕೊಂಡು ಒಯ್ದು ಕಾರಿನಲ್ಲಿ ಇಟ್ಟರು. ಕ್ಷಣಕ್ಷಣಕ್ಕೆ ಜವಾನರು ತನಗೆ ನಮಸ್ಕಾರ ಮಾಡುತ್ತಿದ್ದದ್ದು ಸ್ವೀಕರಿಸಿದ. ತಂದೆ ಬರುವರೆಂದು ಮಗಳು ರೇಶನ ದಿನಗಳಿದ್ದರೂ ಮಂಡಿಗೆಯನ್ನು ಮಾಡಿದ್ದಳು. ಕಾರಿಳಿದ ಕೂಡಲೇ ಎದುರಿಗೆ 'ಕಾಮೇಶ್ವರಿ ಬಂದು ಬರ ಮಾಡಿಕೊಂಡಳು. ಅವಳ ಐಶ್ವರ್ಯವನ್ನು ಕಂಡು ವಿಶ್ವೇಶ್ವರ ಭಟ್ಟರು ಮನದಲ್ಲಿ ಹಿರಿಹಿರಿ ಹಿಗ್ಗಿದರು. ಸುಖದಿಂದ ಬೆಳೆದ ಮಗಳ ಸುಂದರ ರೂಪವನ್ನು ಕಂಡು ಕಣ್ಣುಹತ್ತಿ ದೃಷ್ಟಿಯಾಗಬಹುದೆಂದು ಕಣ್ಣು ಮುಚ್ಚಿಕೊಂಡರು. ಅಳಿಯನ ದರ್ಪವನ್ನು ಕಂಡು ಮನದಲ್ಲಿಯೇ ಅಭಿಮಾನ ಪಟ್ಟು. ಇದ್ದರೆ ಇಂಥ ಅಳಿಯನಿರಬೇಕೆಂದು ಅಭಿಮಾನಕ್ಕೆ ನೀರೆರಚುತ್ತಿದ್ದ. ನೀನು ಗಂಡು ಮಗುವನ್ನು ಹೆತ್ತು ಅಭಿಮಾನ ಪಡೆಯದಿದ್ದರೂ ದರ್ಪದ ಅಳಿಯನಿರುವನೆಂದು ಹೆಮ್ಮೆಪಡೆಂದು ತನ್ನ ಹೆಂಡತಿಗೆ ವಿಶ್ವೇಶ್ವರ ಭಟ್ಟರು ಹೇಳಿದರು. ಜಿಲ್ಹೆಯ ಅಧಿಕಾರಿಯಾಗಿದ್ದರೂ ಅಳಿಯ ಬಂದು ತನಗೆ ನಮಸ್ಕಾರ ಮಾಡಿದ್ದು ನೋಡಿ ಮುಗಿಲು ಮೂರೇ ಬಟ್ಟು ಉಳಿಯಿತು. ತನ್ನೆದುರಿಗೆ ವಿದ್ಯೆಯ ಗರ್ವವಿಲ್ಲ, ಅಧಿಕಾರದ ಹೆಮ್ಮೆಯಿಲ್ಲ, ಯೌವನದ ಮದವಿಲ್ಲ, ಐಶ್ವರ್ಯದ ಸೊಕ್ಕಿಲ್ಲ; ಎಂದು ಅಳಿಯನನ್ನು ಮನದಲ್ಲಿ ಹೊಗಳುತ್ತಿದ್ದರು.— ಹೀಗೆ ವಿಶ್ವೇಶ್ವರ ಭಟ್ಟರು ವಿಚಾರ ವಿಹಾರದಲ್ಲಿ ಮಗಳ ಮುಂಬರುವ ಜೀವನದ ಸವಿ ಹಗಲುಕನಸುಗಳನ್ನು ಮೇಲಿಂದ ಮೇಲೆ ಕಟ್ಟಿ ಉಕ್ಕೇರುವ ಆನಂದದ ತೆರೆಗಳಲ್ಲಿ ತೇಲಾಡುತ್ತಿದ್ದರು. ಕಾಮೇಶ್ವರಿಯ ಮನದಿಂಗಿತವನ್ನು ತನ್ನ ಹೆಂಡತಿಯ ಬಾಯಿಯಿಂದ ಭಟ್ಟರು ಅರಿತ ಮೇಲಂತೂ ಅವರ ಮಂಡಿಗೆಯ ಮನೆಗಳು ಅಲ್ಲಿಯೇ ಕುಸಿದು ಬಿದ್ದು ಮನವೆಲ್ಲ ಧೂಳಿನ ಹುಡಿಯಿಂದ ಮುಸುಕಿ ಬುದ್ಧಿಯು ಮಂಕಾಗಿತ್ತು. ಕಾಮೇಶ್ವರಿಗೆ ಆಂಗ್ಲ ಶಿಕ್ಷಣವನ್ನು ಕೊಡದೆ ಸನಾತನಿಯ ವೇಷದಲ್ಲಿ ಅವಳನ್ನು ಬೆಳೆಸಿದ್ದರೆ ಆಕೆಗೆ ತಮ್ಮನ್ನು ಎದುರಿಸುವಷ್ಟು ಧೈರ್ಯ ಬರುತ್ತಿದ್ದಿಲ್ಲವೆಂದು ಭಟ್ಟರಿಗೆ ಅನಿಸಹತ್ತಿತು. ಹಾಗೆ

ಹೇಳಿದ ತಕ್ಷಣವೇ ಕಾವೇರಿಯು ಕೈಹಿಡಿಯಲು ಸುಶಿಕ್ಷಿತ ಯುವಕರು ಮುಂದೆ ಬರುತ್ತಿದ್ದಿಲ್ಲವೆಂದೂ ಅವರಿಗೆ ಅನಿಸಿತು. ರಾತ್ರಿ ಎಂಟು ಗಂಟೆಯಾದರೂ ಅವರ ವಿಚಾರಕ್ಕೆ ಅಂತವೇ ಉಳಿಯಲಿಲ್ಲ. ಅವರ ಮನೆಯೆದುರಿಗೆ ಭರ್ರೆಂದು ಕಾರು ಬಂದಿತು. ಒಬ್ಬ ಯುವಕ 'ಪಂಡಿತರೇ' ಎಂದು ಕೂಗುತ್ತ ಮನೆ ಹೊಕ್ಕ. ಆತನ ದನಿ ಕೇಳಿ ಪಂಡಿತರು 'ಏಕೆ' ಎಂದು ಕೇಳಿದರು.

'ಇಂದು ಎಂಟು ಹೊಡೆದು ೨೫ ಮಿನಿಟುಗಳಿಗೆ ನಿಮ್ಮ ಮಗಳ ಗಾಯನವಿದ್ದು ಅವಳು ಇನ್ನೂ ವರೆಗೆ ಬರಲಿಲ್ಲ. ಅವಳನ್ನು ಕರೆದು ಕೊಂಡು ಹೋಗಲು ಬಂದಿರುವೆ ಎಲ್ಲಿರುವಳು ನಿಮ್ಮ ಕಾವೇರಿ?' ಎಂದು ಬಂದವನು ಕೇಳಿದನು.

ಪಕ್ಕದ ಕೋಣೆಯಲ್ಲಿ ಓದುತ್ತ ಕುಳಿತುಕೊಂಡ ಕಾವೇರಿಯು ಬಂದವನ ಮಾತುಗಳನ್ನು ಕೇಳಿ ಎದ್ದು ಹೊರಗೆ ಬಂದಳು. ವಿಶ್ವೇಶ್ವರ ಭಟ್ಟರು ಬಂದವನಿಗೆ ಏನೂ ಉತ್ತರವನ್ನು ಕೊಡಲಿಲ್ಲ.

'ನಿಮ್ಮ ರೇಡಿಯೋದಲ್ಲಿನ ನನ್ನ ಕಾರ್ಯಕ್ರಮವನ್ನು ಕಿತ್ತು ಹಾಕಿ ಬಿಡಿರಿ. ನಾನು ಬರುವದಿಲ್ಲವೆಂದು ಹೇಳಿರಿ.' ಎಂದು ಕಾವೇರಿಯು ಹೇಳಿ ತನ್ನ ಕೋಣೆಯಲ್ಲಿ ಹೋದಳು.

'ದೀಪಾವಳಿಯ ನಿಮಿತ್ತವಾಗಿ ನಿಮ್ಮ ಗಾಯನದ ಕಾರ್ಯಕ್ರಮವನ್ನು ಏರ್ಪಾಟ ಮಾಡಿತ್ತು. ಜನಗಳ ಆಗ್ರಹದ ಮೂಲಕ ನಿಮ್ಮ ಕಾರ್ಯಕ್ರಮವಿಡಿಸಿತ್ತು,' ಎಂದು ಬಂದವನು ನುಡಿದನು.

'ನಾನು ಬರುವದಿಲ್ಲೆಂದು ನಿನ್ನ Station Director ನಿಗೆ ಹೇಳು. ನಾಳೆ ಮೈಯಲ್ಲಿ ಸ್ವಾಸ್ಥ್ಯವಿದ್ದರೆ ಬರುವೆ' ಎಂದು ಕೋಣೆಯೊಳಗಿಂದಲೇ ಕಾವೇರಿಯು ಉತ್ತರ ಕೊಟ್ಟಳು.

ರಾತ್ರಿಯ ಊಟವನ್ನು ತೀರಿಸಿಕೊಂಡು ದಿನಾಲು ಹರಟೆಗೆ ಬರುತ್ತಿದ್ದ ಉದರಂಭರಭಟ್ಟರು ಇಂದಾದರೂ ತಮ್ಮ ನಿತ್ಯ ನೇಮಗಳನ್ನು ತೀರಿಸಿ ಕೊಂಡು 'ಪಂಡಿತರೇ' ಎಂದು ಆರ್ಭಟದಿಂದ ಕೂಗುತ್ತ ವಿಶ್ವೇಶ್ವರ ಭಟ್ಟರ ಮನೆಗೆ ಬಂದರು. ಉದರಂಭರಭಟ್ಟರ ಬರವನ್ನು ಕಂಡು

ಬಂದವನು ಹಾಗೇ ಆಗಲಿ ಎಂದು ಗುಣುಗುಡುತ್ತ ಅವರ ಮನೆಯಿಂದ ಹೊರಬಿದ್ದನು.

'ಯಾಕೆ ಪಂಡಿತರೇ, ನಿಮ್ಮ ಕಾಮೇಶ್ವರಿಯ ಗಾಯನ ರೇಡಿಯೋದಲ್ಲಿ ಇಲ್ಲವೇ ? ಇನ್ನೂ ಅವಳು ಕೋಣೆಯಲ್ಲಿ ಇದ್ದಂತೆ ಕಾಣುವದು. ಅವಳ ಗಂಧರ್ವ ಕಂಠವನ್ನು ಇಂದು ಮನದಣಿಯೆ ಕೇಳಿ ಆನಂದ ಪಡಬೇಕೆಂದು ಮನೆಯಲ್ಲಿಯ ಎಲ್ಲ ಕೆಲಸಗಳನ್ನು ಬಿಟ್ಟು ಬಂದೆ.' ಎಂದು ಉದರಂಭರಭಟ್ಟರು ಮಾತನಾಡುತ್ತ ಆತನ ಪಕ್ಕದಲ್ಲಿಯ ಖುರ್ಚಿಯನ್ನು ಎಳೆದುಕೊಂಡು ಕುಳಿತು, ಸೊಂಟದಲ್ಲಿಯ ನಾಸೀ ಪುಡಿಯ ಡಬ್ಬಿಯನ್ನು ತೆಗೆದು ಬೆರಳುಗಳಿಂದ ಬಡಿದು ಅಣುಕೃತ ಮಾಡಿ 'ಏನು ಮದರಾಸದ ನಶ್ಯ ! ದಿವ್ಯ ನಶ್ಯ !' ಎಂದು ಏರಿಸಿದರು.

ವಿಶ್ವೇಶ್ವರ ಭಟ್ಟರು ಏನೂ ಉತ್ತರವನ್ನು ಕೊಡಲಿಲ್ಲ. ಅವರು ಇನ್ನೂ ಕನಸಿನಲ್ಲಿಯೇ ಇದ್ದರು. ಪೀನೋದರರ ಉದರಂಭಟ್ಟರು ಮಾತಿಗೆ ಮೊದಲಿಲ್ಲ ಆಕಾಶಕ್ಕೆ ನಿಚ್ಚಣಿಕೆಯಿಲ್ಲವೆಂಬಂತೆ ಪಿಟಿಪಿಟನೆ ಏನೋ ಮಾತನಾಡಹತ್ತಿದರು. ಅವರ ಯಾವ ಮಾತಿಗೂ ಪಂಡಿತರ ಉತ್ತರವೇ ಇಲ್ಲ. ವಿಶ್ವೇಶ್ವರ ಭಟ್ಟರೂ ಉದರಂಭರ ಭಟ್ಟರೂ ಒಂದೇ ದೇಶಕೋಶದವರು. ಹಾಗೂ ನೆರೆಹೊರೆಯವರು. ವಿಶ್ವೇಶ್ವರ ಭಟ್ಟರು ಸಂಸ್ಕೃತ ಪಂಡಿತರು.

'ಏಕೆ ಕಾಮೇಶ್ವರಿ, ಇಂದು ನಿನ್ನ ಗಾನದಿಂದ ನನ್ನ ಮನ ತಣಿಸುವದಿಲ್ಲವೇ ? ನಿನ್ನ ಕಂಠ ಅಬ್ಬ ! ಎಷ್ಟು ಹೊಗಳಿದರೂ ಸಾಲದು. ನಿನ್ನೆದುರಿಗೆ ಕೋಗಿಲೆ ಹಿಂದೆ ಬೀಳುವದು.' ಎಂದು ಉದರಂಭರ ಭಟ್ಟರು ಎದ್ದು ಕಾಮೇಶ್ವರಿಯ ಕೋಣೆಯ ಹತ್ತರ ಹೋಗಿ ಮಾತನಾಡಿದರು.

'ಮನೆಗೆ ಹೋಗಿ ಮಲಗಿಕೊಳ್ಳಿರಿ. ಸುಮ್ಮನೆ ತ್ರಾಸ ಕೊಡಬೇಡಿರಿ' ಎಂದು ಅವಳು ಕೋಣೆಯೊಳಗಿಂದಲೇ ಉತ್ತರ ಕೊಟ್ಟಳು.

'ಏಕೆ ರುದ್ರಾಣಿಯ ಅವತಾರ ! ರುದ್ರನನ್ನು ಎಲ್ಲಿಂದ ನಾನು ಹುಡುಕಿ ತರಲಿ' ಎಂದು ಅವರು ಹೇಳಿದರು.

'ಇಲ್ಲಿ ಬಾ ಉದೂ. ಇಂದು ಅವಳಿಗೆ ಸಿಟ್ಟು ಬಂದಿರುವದು. ದಿನಾಲು ರೇಡಿಯೋಕ್ಕೆ ಹೋಗತಕ್ಕವಳು ಇಂದು ನನ್ನ ಮೇಲಿನ ಸಿಟ್ಟಿನಿಂದ ಒಲ್ಲೆಂದು ಹೇಳಿ ಕಳಿಸಿದಳು. ಇಂದು ಅವಳ ಹೆಸರು ತಗವಬೇಡ' ಎಂದು ವಿಶ್ವೇಶ್ವರ ಭಟ್ಟರು ನುಡಿದರು.

'ತಂದೆ ಮಕ್ಕಳಲ್ಲಿ ಬಂದ ನ್ಯಾಯವಾದರೂ ಏನು?'

'ಏನೇ ಇರಲಿ!'

'ಯಾಕೆ, ಅದನ್ನು ನನ್ನ ಮುಂದೆ ಹೇಳಬಾರದೋ?'

'ಹಾಗೇನು ಇಲ್ಲ. ನಿನ್ನ ಎದುರಿಗೆ ನಾನು ಹೇಳದಿದ್ದರೆ ಮತ್ತಾರ ಮುಂದೆ ಹೇಳಬೇಕು.'

'ಇಲ್ಲ, ನೀನು ಕಾಲೇಜದಲ್ಲಿ ಸಂಸ್ಕೃತ ಪಂಡಿತ. ನಾನು ಬಡ ವೈದಿಕ. ನನ್ನೆದುರಿಗೆ ಅದು ಹೇಳುವ ವಿಷಯವಿಲ್ಲದಿದ್ದರೆ.'

'ನಿನ್ನೆದುರಿಗೆ ಇಂದಿನ ವರೆಗೆ ಯಾವದನ್ನಾದರೂ ಮುಚ್ಚಿ ಇಟ್ಟಿರುವೆನೇನು?'

'ಕೆಲವು ಹೇಳುವ ಮಾತು ಇರುವವು; ಕೆಲವು ಮನೆತನದ ವಿಷಯ ಮನೆತನದಲ್ಲಿಯೇ ಇರಬೇಕಾಗುವದು.'

'ನೀನೂ ನಮ್ಮ ಮನೆಯವನೇ ಇರುವಿ. ಇಂದಿನ ವರೆಗೆ ನಮ್ಮ ಮನೆತನದ ವಿಷಯ ಯಾವದೂ ಮುಚ್ಚಿಟ್ಟಿಲ್ಲ.' ಎಂದು ವಿಶ್ವೇಶ್ವರ ಭಟ್ಟರು ತಲೆತುರಿಸಿಕೊಳ್ಳುತ್ತ ಹೇಳಿದರು.

ಬಡತನದ ಬಾಳುವೆಯಲ್ಲಿ ಹುಟ್ಟಿ ಬೆಳೆದವರು ವಿಶ್ವೇಶ್ವರ ಭಟ್ಟರು. ಸಂಸ್ಕೃತ ಪಾಂಡಿತ್ಯವು ಅವರ ಮನೆತನದಲ್ಲಿ ಅದಿಬುನಾದಿಯಿಂದ ಬಂದದ್ದರಿಂದ ಅವರಾದರೂ ಸಂಸ್ಕೃತದಲ್ಲಿ ಪ್ರಗಲ್ಭವಾದ ಜ್ಞಾನವನ್ನು ಸಂಪಾದಿಸಿ ಪಾಂಡಿತ್ಯವನ್ನು ಸಂಪಾದಿಸಿದ್ದರು. ಇಂಗ್ಲಿಷದಲ್ಲಿ ತಕ್ಕ ಮಟ್ಟಿಗೆ ಜ್ಞಾನ ಮಾಡಿಕೊಂಡಿದ್ದರು. ಮದರಾಸಿನ ಯಾವದೋ ಒಂದು ಕಾಲೇಜನಲ್ಲಿ ಅವರು ಸಂಸ್ಕೃತ ಪಂಡಿತರಾಗಿದ್ದು ತಮ್ಮ ಒಬ್ಬಳೇ ಮಗಳಾದ ಕಾಮೇಶ್ವರಿಗೆ ಉಚ್ಚ ಶಿಕ್ಷಣವನ್ನು ಕೊಡಿಸಿದ್ದರು. ಕಾಲಮಾನಕ್ಕೆ ಹೊಂದಿಕೊಂಡು ಹೋಗುವದು ಮಾನವನ ಸ್ವಭಾವ.

ಮಗಳನ್ನು ಆಯ್. ಎ. ಎಸ್. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿದ ಒಬ್ಬ ಯುವಕನಿಗೆ ಧಾರೆಯೆರೆದು ಕೊಡಬೇಕೆಂದು ಅವರ ಮನದ ಆಕಾಂಕ್ಷೆ. ಕಾಮೇಶ್ವರಿಯಾದರೂ ಸಲಕ್ಷಣ ಹುಡುಗಿ. ವಿಶ್ವೇಶ್ವರ ಭಟ್ಟರು ಎಲ್ಲಿಯೋ ಒಬ್ಬ ಯುವಕನನ್ನು ತನ್ನ ಮನದ ಆಕಾಂಕ್ಷೆಯಂತೆ ಶೋಧಿಸಿ ತೆಗೆದಿದ್ದರು. ಆತನ ತಂದೆ ಒಪ್ಪಿದ್ದ; ಯುವಕನನ್ನು ಮಾತ್ರ ಕೇಳಿದ್ದಿಲ್ಲ. ವರದಕ್ಷಿಣೆಗೆ ಕೊಡಲು ಬೇಕಾದ ಇಪ್ಪತ್ತೈದು ಸಾವಿರ ರೂಪಾಯಿಗಳ ಸಲುವಾಗಿ ವಿಶ್ವೇಶ್ವರ ಭಟ್ಟರು ಜಾಲವನ್ನು ಹಾಕಿದ್ದರು. ಕೈಯಲ್ಲಿಯ ಪಕ್ಷಿ ಹಾರಿ ಹೋಗಬಹುದೆಂಬ ಸಂಶಯದಿಂದ ಅವರದು ಉದ್ವಿಗ್ನ ಮನಸ್ಸಾಗಿತ್ತು.

ಕಾಮೇಶ್ವರಿಯ ಸುಂದರ ರೂಪ, ಮಧುರ ಕಂಠ ಇವುಗಳಿಗೆ ಮೋಹಿತನಾದ ಒಬ್ಬ ದಿಗ್ದರ್ಶಕ ತಾನು ತೆಗೆಯುವ ಚಲಚ್ಚಿತ್ರದಲ್ಲಿ ಅವಳು ನಟಿಸಬಹುದೇನೆಂದು ವಿಶ್ವೇಶ್ವರ ಭಟ್ಟರಿಗೆ ಕೇಳಿ ಅವರಿಗೆ ಪ್ರತಿ ಫಲವಾಗಿ ೩೫ ಸಾವಿರ ರೂಪಾಯಿ ಕೊಡುವೆನೆಂದು ಹೇಳಿದ್ದ. ಮೊದಲು ಮೊದಲು ಕಾಮೇಶ್ವರಿಯನ್ನು ರೇಡಿಯೋದಲ್ಲಿ ಗಾಯನ ಮಾಡಲು ಕಳಿಸಲು ಪಂಡಿತರು ಹಿಂಜರಿಯುತ್ತಿದ್ದರು. ಬಡತನದ ಮೂಲಕವಾಗಲಿ ಇಲ್ಲವೇ ಜನಗಳ ಆಗ್ರಹದ ಸಲುವಾಗಿ ಆಗಲಿ ಯಾವದೋ ಒಂದು ಕಾರಣದಿಂದ ಅವರು ರೇಡಿಯೋ ಕಾರ್ಯಕ್ರಮಕ್ಕೆ ಒಪ್ಪಿಕೊಂಡಿದ್ದರು. ಕಾಮೇಶ್ವರಿಯು ಅಡ್ಡಹಾದಿಯನ್ನು ಹಿಡಿಯಬಹುದೆಂಬ ಹೆದರಿಕೆಯಿಂದ ಮೊದಲಿನ ಎರಡು ಮೂರು ತಿಂಗಳು ಅವಳ ಜತೆಯಲ್ಲಿಯೇ ಇದ್ದು ನೆರಳಿನಂತೆ ಹಿಂಬಾಲಿಸಿ ಕಾರ್ಯಕ್ರಮ ಮುಗಿದ ಕೂಡಲೇ ಮನೆಗೆ ಕರೆದುಕೊಂಡು ಬರುತ್ತಿದ್ದರು. ದಿನಗಳು ಕಳೆದಂತೆ ಪಂಡಿತರ ಹಿಡಿತವು ಸಡಿಲಾಗಹತ್ತಿತು. ಹಾಗೆ ಹಿಂಬಾಲಿಸುವದು ಮಗಳಿಗೆ ಸರಿ ಅನಿಸಲಿಲ್ಲ. ಅವಳು ವಿರೋಧಿಸಿದಳು. ಮಗಳ ಮನದ ವಿರೋಧವಾಗಿ ನಡೆದರೆ ಆಕೆಯ ಗಾಯನದಿಂದ ಪ್ರತಿ ತಿಂಗಳಲ್ಲಿಯೂ ಬರುವ ಹಣಕ್ಕೆ ಕಾಟುಹಾಕಬೇಕಾಗುವದೆಂಬ ಹೆದರಿಕೆ; ಕಾಮೇಶ್ವರಿಯ ಮಧುರ ಕಂಠದಿಂದ ಹೊರಡುವ ಇಂಪಾದ ದನಿಯಿಂದ ಮೋಹಿತರಾದ ಜನಗಳು ಮಾಡುತ್ತಿದ್ದ ಪ್ರಶಂಸೆಯನ್ನು ಕಂಡು ಮನದ ಹಿಗ್ಗು; ತಮ್ಮ ಪಾಂಡಿತ್ಯದಿಂದ ಹೆದರಿಕೆ ಹಾಗೂ ಹಿಗ್ಗು ಇವುಗಳನ್ನು ಜೀವನದ ದಿನದ ನಡಾವಳಿಯಲ್ಲಿಯೇ ಸಮರಸ ಮಾಡಿಕೊಂಡು ಬಿಟ್ಟರು.

ಹೆದರಿಕೆ ಹಾರಿಹೋಯಿತು. ಹಿಗ್ಗು ಅಂಟಿಕೊಂಡಿತು. ಮೊದಲು ಮನಸ್ಸನ್ನು ಕಚ್ಚು ಮಾಡುತ್ತಿದ್ದ ಭಾವನೆಗೆ ಹೃದಯದಲ್ಲಿ ಅಡಿಯೇ ಉಳಿಯಲಿಲ್ಲ. ನಡೆಯಿಂದ ನುಡಿಯಾಗುವದು. ನುಡಿಯಿಂದ ನಡೆಯಾಗುವದೋ ?

ಚಲಚ್ಚಿತ್ರದಲ್ಲಿ ನಟಿಸಲು ಕಾಮೇಶ್ವರಿಯನ್ನು ಕಳುಹಿಸಬೇಕೆಂದು ವಿಶ್ವೇಶ್ವರ ಭಟ್ಟರ ಮನಸ್ಸಿನಲ್ಲಿ ಇದೊಂದೇ ಚಿತ್ರದಲ್ಲಿ ನಟಿಸುವದರಿಂದ ಜನ ಸ್ಥಾನದಿಂದ ಆಕೆಯು ಭಾಗ್ಯೋದಯವಾಗುವದೆಂದು ಆತ ತಿಳಿದ. ಕೊಂಡಿದ. ವರದಕ್ಷಿಣೆ ಕೊಡಲು ಅಷ್ಟು ಹಣ ಆತನಲ್ಲಿ ಇದ್ದಿಲ್ಲ. ಮಗಳ ಸೌಂದರ್ಯ ಹಾಗೂ ಕಲೆ ಇವುಗಳ ಉಪಯೋಗದಿಂದ ವರದಕ್ಷಿಣೆಯ ಹಣವನ್ನು ತೆಗೆಯಬೇಕೆಂದು ಮಾಡಿದ್ದ. ಉದರಂಭರ ಭಟ್ಟರೆದುರಿಗೆ ಆತ ತಾನು ಮಾಡಿಕೊಂಡ ವಿಚಾರವನ್ನು ವಿವರಿಸಿ ಹೇಳಿದ. ಕೋಣೆಯಲ್ಲಿ ಕಾಮೇಶ್ವರಿಯು ತಂದೆ ಹೇಳುವದೆಲ್ಲವನ್ನು ಕೇಳುತ್ತ ಕುಳಿತಿದ್ದಳು. ಅವಳಿಗೆ ಏನನಿಸಿತೋ ಏನೋ ಥಟ್ಟನೆ ಹೊರಗೆ ಬಂದಳು. ರೇಡಿಯೋದಲ್ಲಿ ತನ್ನ ಕಾರ್ಯಕ್ರಮಕ್ಕೆ ಹೋಗಬೇಕೆಂದು ಬಹಳೇ ಥಾಟಿನ ವೇಷಭೂಷಣಗಳನ್ನು ಮಾಡಿಕೊಂಡಿದ್ದಳು. ಕಾಮೇಶ್ವರಿಯ ಇಂದಿನ ವೇಷವನ್ನು ಕಂಡು ಉದರಂಭರ ಭಟ್ಟರು 'ಏನು ರಂಭಾ, ಊರ್ವಶಿ ಆಗಿರುವಿಯಲ್ಲ' ಎಂದು ನುಡಿದು ನಕ್ಕು ಚಿಟಿಕೆಯನ್ನು ಹೊಡೆದರು. ಮಗಳ ಬರವನ್ನು ಕಂಡು ವಿಶ್ವೇಶ್ವರ ಭಟ್ಟರು ತಾವು ಹೇಳುತ್ತಿದ್ದ ಮಾತನ್ನು ಅಷ್ಟಕ್ಕೇ ನಿಲ್ಲಿಸಿದರು.

'ನೀವೂ ಮುಂದಿಸಿದ ಆಟವನ್ನು ಕಂಡು ನನಗೆ ಬಹಳೇ ಸೋಜಿಗವಾಗಿರುವದು. ನಾನು ಚಿಕ್ಕ ಹುಡುಗಿಯಿದ್ದು ಓನಾಮಾ ಕಲಿಯುವ ಮುಂಚೆ, ನನ್ನ ಮಗಳಿಗೆ ಇಂಗ್ಲೀಷ ಶಾಲೆಯ ಪಾವಟಿಗೆಯನ್ನು ಎಂದೂ ಹತ್ತಿಸುವದಿಲ್ಲೆಂದು ಅಂದದ್ದು ಇನ್ನೂ ನನ್ನ ನೆನಪಿನಲ್ಲಿ ಇರುವದು. ಇಂಗ್ಲೀಷ ಕಲಿತವರೆಲ್ಲರೂ ಆರ್ಯ ಸಂಸ್ಕೃತಿಯನ್ನು ತಿರಸ್ಕರಿಸುವರೆಂದೂ ಸ್ವೇಚ್ಛಾಚಾರಿಗಳಾಗುವರೆಂದೂ, ಸತಿಯು ಪತಿಯನ್ನು ಗತಿಗೆ ಹಚ್ಚುವಳೆಂದೂ ಪತಿಯು ಸತಿಯನ್ನು ಹತಮಾಡುವನೆಂದೂ, ನೀವೂ ಮೊದಲಿಂದ ಮೇಲೆ ನನಗೆ ಹೇಳುತ್ತಿದ್ದ. ಅವುಗಳನ್ನು ವಿಶದ ಪಡಿಸಲು ಕಟ್ಟುಕತೆಗಳನ್ನು ಹೇಳುತ್ತಿದ್ದನು. ನಾನು ಬೆಳೆದಂತೆ ಅಪ್ಪನ ಆಚಾರವಿಚಾರದಲ್ಲಿ

ಬಹಳೇ ಅಂತರವಿರುವದೆಂದು ನನಗೆ ಅನಿಸಹತ್ತಿತು. ಮಗಳ ಕಳಕಳಿಯಿಂದ ತಂದೆಯ ತಪ್ಪು ಅಷ್ಟು ಒಡೆದು ಕಾಣಿಸಲಿಲ್ಲ. ತಿರಸ್ಕರಿಸುತ್ತಲೇ ನನಗೆ ಇಂಗ್ಲೀಷ ಶಿಕ್ಷಣ ಕೊಟ್ಟ. ಬೇಡ ಬೇಡ ಅನ್ನುತ್ತಲೇ ನನ್ನನ್ನು ಪದವೀಧರಳನ್ನಾಗಿ ಮಾಡಿದ. "ಗಾನಿಯು ಗುಣಗಳ ಹಾನಿಯು; ಗಾಯ್ತಿ ಕಳು ಸತಿಯಾಗಲಾರಳು: ಅನೇಕರ ರತಿಯಾಗುವಳು; ಗಾನಿಗೆ ಪತಿಧರ್ಮವು ಸತ್ತ ಧರ್ಮವು," ಎಂಬೀ ಪಾಂಡಿತ್ಯದ ಮುಕ್ತಾಫಲಗಳನ್ನುದರಿಸುತ್ತ ಗಾಯಕನನ್ನು ಇಟ್ಟು ನನಗೆ ಗಾನದಲ್ಲಿ ನೈಪುಣ್ಯವನ್ನು ಕೊಡಿಸಿದ. ಮಧುರ ಕಂಠದಿಂದ ದೇವರ ನಾಮಸ್ಮರಣೆಯನ್ನು ಮಾಡಿ ಹೆಳವನ ಕಟ್ಟಿಯ ಗಿರಿಯಮ್ಮಳಾಗಬೇಕೆಂದು ನನ್ನ ಮಗಳಿಗೆ ಗಾಯನವನ್ನು ಕಲಿಸುವೆನೆಂದು ಕೇಳುವ ಜನಗಳಿಗೆ ಹೇಳಿದ. ದೇವರ ನಾಮ ಸ್ಮರಣೆಯ ನಾಲ್ಕು ಪದ್ಯಗಳನ್ನು ರೇಡಿಯೋದಲ್ಲಿ ಹಾಡಿ ಬಂದರೆ ಜನಗಳಿಗೆ ದೇವರ ಮೇಲೆ ಭಾವನೆ ಹುಟ್ಟುವದೆಂದು ನನಗೆ ಹೇಳಿ ಕಳುಹಿಸಿದ. ರೇಡಿಯೋ ದಲ್ಲಿ ಹಾಡಬೇಕೆಂಬ ಇಚ್ಛೆ ನನ್ನ ಮನದಲ್ಲಿ ಎಳ್ಳಷ್ಟೂ ಇಲ್ಲ. ತಾತನ ಮಾತಿಗೆ ಸೋತು ಹೋದೆ ದಾಸರ ಪದ್ಯಗಳಿಗಿಂತ ಸತಿಪತಿಯರ ರತಿಯ ವಿಚಾರ ಹಾಡುಗಳನ್ನು ಹಾಡಿದರೆ ಜನ ಜಂಗುಳಿಯ ಮೆಚ್ಚುಗೆ ಹೆಚ್ಚಾಗುವದೆಂದು Station Director ನು ಹೇಳಿದಾಗ್ಗೆ ಧರ್ಮಸಿಂಧುವನ್ನು ಉಸಿರು ಮಾಡಿ ಕೊಂಡಿದ್ದ ತಾತ ಅನುಕೂಲಸಿಂಧು ಹಿಡಿದು ಮಗಳಿಗೆ ಇಂತಹ ಹಾಡು ಗಳನ್ನು ವಾರಕ್ಕೆ ಎರಡು ಸಲ ಹಾಡಲು ಅನುಜ್ಞೆ ಕೊಟ್ಟ. ಪರರೊಡನೆ ನಾನು ಮಾತನಾಡಿದರೆ ಅಸಹ್ಯ ಪಡುತ್ತಿದ್ದ ತಾತ ಪರರೇ ದುಂಬಾಲ ಬಿದ್ದು ನನ್ನನ್ನು ಮಾತನಾಡಿಸುವದು ಕಂಡು ಆನಂದದಿಂದ ಆರಿಹಾಸವನ್ನು ತೋರಿಸುವನು. ಸಿರಿವಂತರ ಯುವಕರಿದ್ದರಂತೂ ತೀರಿತು. ಅವರು ಹೋದ ಮೇಲೆ ಅವರೇನಂದರೆಂದು ನನಗೆ ಕೇಳುವ ಸ್ವಭಾವ ಆತನಲ್ಲಿ ಮೂಡಿರುವದು. ಸನಾತನಿಯೆಂಬ ವೇಷದಿಂದ ಇದು ನಾರುವದು ಪರಗೆ ಬೇಡ; ಸತ್ತು ನಾರುವದು ಬೇಕು. ವಿಚಾರಕ್ಕೆ ತಡೆ ಆಚಾರಕ್ಕೆ ಹೊಡೆ ಎಂದು ಹೇಳುವವರು ಉರುಳಿ ಬೀಳುವರು. ಚಲಚ್ಚಿತ್ರದಲ್ಲಿಯ ನಟ ಗಳೆಲ್ಲರೂ ಗಯ್ಯಾಳಿಗಳೆಂದು ಒಂದಲ್ಲ, ಎರಡಲ್ಲ ನೂರು ಸಲ ನನ್ನೆದುರಿಗೆ ಹೇಳಿರುವನು. ಎಲ್ಲರೂ ಹಾಗೆ ಆಗುವದು ಶಕ್ಯವಿಲ್ಲೆಂದು ನಾನು ವಾದಿಸಿ

ದರೆ, ಬೆಂಕಿಗೆ ಹೆತ್ತ ತುಪ್ಪ ಸೋಂಕಿದರೆ ಕರಗದೇ ಎಂದು ಹೇಳಿದನು. ಎಲ್ಲಿಯೋ ಆಯ. ಎ. ಎಸ್ ದ ವರನಂತೆ. ೨೫ ಸಾವಿರ ರೂಪಾಯಿಯ ವರದಕ್ಷಿಣೆಯಂತೆ ಎಲ್ಲವೂ ನೀರಿನಲ್ಲಿ ಮಲಗಿಸಿದ ಎಮ್ಮೆಯ ವ್ಯವಹಾರ. ನಟಿಯ ವೃತ್ತಿಯೆಂದರೆ ಜಿಗಿದು ನಿಲ್ಲುತ್ತಿದ್ದ ತಾಯಿ, ತನ್ನ ಮಗಳಿಗೆ ಆ ವೃತ್ತಿಯನ್ನು ಒಮ್ಮೆ ಕೈಕೊಳ್ಳಲು ಹೇಳುವದನ್ನು ಕಂಡು ನನಗೆ ಬಹಳೇ ಸೋಜಿಗವೆನಿಸುವದು. ನಾನು ನಿಮಗೆ ಎದುರು ವಾದಿಸುವವಳೆಂದು ತಿಳಿದು ಕೊಳ್ಳಬೇಡಿರಿ. ನನ್ನ ಹಿತವನ್ನು ನೀವು ಬಯಸಿದ್ದು ಗೊತ್ತು. ಹೆಂಗಸು ಹಣದಾಸೆಗಾಗಿ ತನ್ನ ದೇಹವನ್ನು ಮಾರಿಕೊಂಡರೆ ಅವಳಿಗೆ ಬಸವಿಯೆಂದು ಹೀನ ದೃಷ್ಟಿಯಿಂದ ನೋಡುವಿರಿ. ಆಯ. ಎ. ಎಸ್‌ದ ವರನು ತನ್ನ ಸ್ಥಿತಿಯನ್ನು ವರದಕ್ಷಿಣೆಯಿಂದ ಮಾರಿಕೊಂಡಂತಾಗಿ ಬಸವಿಯ ಓಲೆ ಯಲ್ಲಿ ಬರುವದಿಲ್ಲವೋ? ಒಬ್ಬಳು ರೂಪವನ್ನು ಮಾರುವಳು; ಮತ್ತೊಬ್ಬನು ಸ್ಥಿತಿಯನ್ನು ಮಾರುವನು.' ಎಂದು ಕಾವೇರೀಶ್ವರಿಯು ಮಾತನಾಡಿ ಕೋಣೆಯಲ್ಲಿ ಹೋಗಿ ಬಾಗಿಲವನ್ನು ಮುಚ್ಚಿಕೊಂಡು ಕುಳಿತಳು.

ಉದರಂಭರ ಭಟ್ಟ ವಿಶ್ವೇಶ್ವರ ಭಟ್ಟನ ಮೊಗವನ್ನು ನೋಡಿದ. ಆತನ ಕಣ್ಣೊಳಗಿಂದ ನೀರು ಪಳಪಳನೆ ಉದುರಹತ್ತಿತು.

ವಿಶ್ವದ ಈಶ್ವರನೆಂದು ಹೆಸರಿದ್ದರೂ ಕಲ್ಲೊಳಗಿನ ಕಪ್ಪೆಯಾಗಿ ಚಿಪ್ಪೆ ಯಲ್ಲಿಯ ನೀರಿಗೆ ಹಾತೊರೆಯಹತ್ತಿದ.

ಕಾವೇರೀಶ್ವರಿಯ ಲಗ್ನದ ಹವಣಿಕೆ ಹಾಕಿದ.

ಆಕೆ ಎಣಿಕೆಯಿಂದ ವಿಶ್ವೇಶ್ವರ ಭಟ್ಟರ ದಂತಭಗ್ನ ಮಾಡಿದಳು.

---

# ಜೀವನದ ಭೂತ

ತಂದೆತಾಯಿಗಳು ಬಹಳೇ ಮಮತೆಯಿಂದ. ಅಕ್ಕರತೆಯಿಂದ ತಮ್ಮ ಮಗುವಿಗೆ ರಂಗಸ್ವಾಮಿ ಎಂದು ಹೆಸರನ್ನಿಟ್ಟಿದ್ದರು. ಹೆಸರಿಟ್ಟವರು ಎಷ್ಟು ಶ್ರಾದ್ಧಗಳನ್ನು ಕಂಡರೋ ದೇವರೇ ಬಲ್ಲ. ರಂಗಸ್ವಾಮಿಗೆ ಜನಗಳು ಮಂಗಸ್ವಾಮಿ ಎಂದು ಕರೆಯುವುದನ್ನು ಅವರು ಮಾತ್ರ ಕೇಳಲಿಲ್ಲ ಹಾಗೂ ನೋಡಲಿಲ್ಲ. ಮಾನವರ ಅಜ್ಜ ಮುತ್ತಜ್ಜ ಪ್ರಪಿತಾಮಹ ಪಿತೃ ಪ್ರಪಿತಾಮಹಗಳ ಎಣಿಕೆಯಿಲ್ಲದ ತಲೆಗಳ ಹಿಂದೆ ಮಂಗನು ಮಾನವರ ರಕ್ತ ಸಂಬಂಧಿನೆಂದೂ ನೆಂಟನೆಂದೂ ಡಾರ್ವಿನ್ನನು ಪ್ರತಿಪಾದಿಸಿ ಹಿರಿ ಸನ್ಮಾನವನ್ನು ಕಟ್ಟಿದ. ಮಾನವನ ಹಾಗೂ ಮಂಗನ ನಡುವಿನ ಮಧ್ಯಂತರದ ಸಂಬಂಧದ ಪಾವಟಿಗೆಯನ್ನು ಕೂಡಿಸಲು ಆತ ಅಸಮರ್ಥನಾದ. ಆ ಮಾಯವಾದ ಪಾವಟಿಗೆ ನಮ್ಮ ರಂಗಸ್ವಾಮಿ. ಮೈಮೇಲೆ ಕೂದಲುಗಳ ಬೆಳೆ ಸಮೃದ್ಧಿ, ಕೂದಲುಗಳಲ್ಲಿ ಹೇನುಗಳು ಹೊಕ್ಕರೆ ಸಿಗುವುದು ಖಚಿತ. ನಿಲುವಿಕೆ ಚಿಂಪೆಂಜಿಯಷ್ಟು ಎತ್ತರ. ಹರವಾದ ಚಪ್ಪಟೆಯಾದ ಮೋರೆ ಮೂಗಿನ ಸೊಳ್ಳೆಗಳು ತುಟಿಯ ಮೇಲೆ ಅಲೆದಾಡುತ್ತಿದ್ದುವು. ನಾಲ್ಕು ಅಂಗುಲ ಅಗಲವಾದ ಹಣೆ. ಇಂತಹ ಭವ್ಯವಾದ ಆಕೃತಿಗೆ, ದೇಹದ ಮೈಮಾಟಿಗೆ ತಲೆ ತೀರ ಸಣ್ಣದು. ಆತನ ರೂಪವನ್ನು ಕಂಡು ಜನರು ರಂಗಸ್ವಾಮಿ ಅನ್ನದೆ ಮಂಗಸ್ವಾಮಿ ಎಂದು ಅನ್ನುತ್ತಿದ್ದರು. ರಂಗಸ್ವಾಮಿಯಾದರೂ ರೇಗಿಗೇಳದೆ ಸಹನೆಮಾಡಿಕೊಂಡು ನಗುತ್ತಿದ್ದ. 'ನನ್ನ ದೇಹ ಮಂಗನಂತೆ ಆದರೆ ನನ್ನ ಮನಸು ರಂಗನಾಥನಂತೆ. ನಿಮ್ಮ ದೇಹ ರಂಗನಾಥನಂತೆ; ಮನಸ್ಸು ಮಾತ್ರ ಮಂಗನಂತೆ' ಎಂದು ರಂಗಸ್ವಾಮಿ ಜನಗಳಿಗೆ ನಗುತ್ತ ಹೇಳುತ್ತಿದ್ದ.

ಮಂಗಸ್ವಾಮಿ ಇಳಿತರದ ವಯಸ್ಸಿನವನಾಗಿದ್ದ. ಆತನಿಗೆ ಮಕ್ಕಳೆಂದರೆ ಒಂದೇ ಒಂದು ಹುಡುಗಿ. ಆಕೆ ಬಿ. ಎ. ಕ್ಲಾಸಿನಲ್ಲಿ ಓದುತ್ತಿದ್ದಳು. ಅವಳ

ಹೆಸರು ಯಶೋಧರೆ. ರೂಪದಲ್ಲಿ ಆಕೆ ತಂದೆಯನ್ನು ಸ್ವಲ್ಪವರೂ ಹೋಲುತ್ತಿದ್ದಿಲ್ಲ. ಆಕೆಯು ತಾಯಿಯ ಬಾಯಿಯಿಂದ ಉಚ್ಚಿ ಬಿದ್ದಂತೆ ಕಾಣಿಸುತ್ತಿದ್ದಳು. ಅವಳ ರೂಪಕ್ಕೆ ಯೌವನವು ಪುಟಕೊಟ್ಟಂತೆ ಇತ್ತು. ಬಳ್ಳುವ ದೇಹಕ್ಕೆ ಭಾರವಾದ ಎದೆಗಳು. ನಿಡಿದಾದ ಮೂಗಿಗೆ ಚಪಲ ಕಣ್ಣುಗಳು ಕಾಂತಿಯನ್ನು ಕೊಡುತ್ತಿದ್ದವು. ತಾಯಿಯ ನಿಲುವಿಕೆ ಸ್ವಲ್ಪ ಗಿಡ್ಡ. ಯಶೋಧರೆಯ ನಿಲುವಿಕೆ ಮಾತ್ರ ಸ್ವಲ್ಪ ಎತ್ತರ. ಒಟ್ಟಾರೆಯಾಗಿ ಅವಳು ನೋಡುವವರ ಮನಸ್ಸಿನಲ್ಲಿ ಒಂದು ಕ್ಷಣವಾದರೂ ತನ್ನ ರೂಪವನ್ನು ನಿಲ್ಲಿಸದೆ ಬಿಡುತ್ತಿದ್ದಿಲ್ಲ.

ಇಂದು ರಂಗಸ್ವಾಮಿ ಕಚೇರಿಯಲ್ಲಿ ಬಹಳ ದುಡಿದು ಎತ್ತಾಗಿ ಉಸ್ಸೆಂದು ಮನೆಗೆ ಬಂದಿದ್ದನು. ಬಂದದ್ದಾದರೂ ರಾತ್ರಿ ಹತ್ತುಗಂಟೆಯ ಸುಮಾರು. ಪ್ರತಿದಿನ ಕಚೇರಿಯಿಂದ ಬಂದ ಮೇಲೆ ಮನೆಯಲ್ಲಿಯ ಕ್ಷೇಮ ಸಮಾಚಾರವನ್ನು ಕೇಳತಕ್ಕವನು, ಇಂದು ಮಾತ್ರ ದುಡಿದು ಹೈರಾಣಾಗಿ ಬಂದಿದ್ದರಿಂದ ಏನೂ ಕೇಳದೆ ತನ್ನ ಅಂಗಿಗಳನ್ನು ತೆಗೆದು ನೆಟ್ಟಗೆ ಬಚ್ಚಲ ಮನೆಗೆ ಹೋದನು. ಆತನ ಹೆಂಡತಿಯಾದರೂ ಏನೂ ಸುದ್ದಿಯನ್ನು ಹೇಳಲಿಲ್ಲ. ಮುಚ್ಚಿದ ತುಟಿಯನ್ನು ಬಿಚ್ಚಲಿಲ್ಲ. ರಂಗಸ್ವಾಮಿ ಬರುವದರೊಳಗಾಗಿ ಎಲ್ಲವನ್ನೂ ಬಡಿಸಿ ಸಿದ್ಧತೆ ಮಾಡಿದಳು. 'ನನ್ನ ಮನಸ್ಸಿಗೆ ಇಂದು ಯಾಕೋ ಬಹಳ ಅಸಮಾಧಾನವಾಗಿರುವದು' ಎಂದು ಗುಣುಗುಡುತ್ತ ರಂಗಸ್ವಾಮಿ ಅಡಿಗೆಯ ಮನೆಯನ್ನು ಹೊಕ್ಕನು. ಹೆಂಡತಿಯು ಏನೋ ಬಡಿಸಿದಳು; ಆತನು ಏನೋ ಉಂಡನು. ಕೈಮೇಲೆ ನೀರು ಬಿದ್ದ ಕೂಡಲೇ ಉಸ್ಸೆಂದು ತನ್ನ ಕೋಣೆಗೆ ಹೋಗಿ ಒರಗಿಕೊಂಡನು. ಒಂದು ಕ್ಷಣದಲ್ಲಿಯೇ ರಂಗಸ್ವಾಮಿ ಗೊರಕೆಯ ತಾನದಲ್ಲಿ ಸಿಕ್ಕು ಕನಸು ಕಂಡೇ ಬಿಟ್ಟ.

ಅಡಿಗೆಯ ಮನೆಯ ಬದಿಯಲ್ಲಿದ್ದ ಕೋಣೆಯಲ್ಲಿ ಯಶೋಧರೆ ನರಳುತ್ತ ಮಲಗಿಕೊಂಡಿದ್ದಳು. 'ಈ ವೇದನೆ ನಾ ತಾಳಲಾರೆನಮ್ಮಾ' ಎಂದು ಒಂದೇ ಸಮನೆ ಅರಚುತ್ತಿದ್ದಳು. ಆಕೆಯ ತಾಯಿ ಊಟಮಾಡದೆ ಎಲ್ಲ ಕೆಲಸಬೊಗಸೆಗಳನ್ನು ಅಲ್ಲಿಯೇ ಬಿಟ್ಟು ಮಗಳ ಕೋಣೆಯನ್ನು

ಹೊಕ್ಕಳು. ಮಗಳ ವೇದನೆಯನ್ನು ಕಂಡು ತಾಯಿಯ ಕರುಳು-ಚಡಪಡಿಸಿತು. ಆಕೆ ಮುಗ್ಧ ಹೆಂಗಸು. ಸ್ಪಷ್ಟವಾಗಿ ತಿಳಿಸಿ ಹೇಳಿದರೆ ಅರಿತುಕೊಳ್ಳುವ ಸ್ವಭಾವ. ಮಗಳಿಗೆ ಏನು ಜಡ್ಡಾಗಿರಬಹುದೆಂಬ ತರ್ಕ ಹಾಕುವದಂತೂ ದೂರ ಉಳಿಯಿತು. 'ನಿನಗೆ ಏನಾಗಿರುವದು, ಹೇಳೇ ಯಶೂ' ಎಂದು ಕನಿಕರದಿಂದ ದೈನಾಸಬಿಟ್ಟು ಮಗಳನ್ನು ಕೇಳಹತ್ತಿದಳು.

'ಮೊದಲು ಈ ವೇದನೆ ಕಡಿಮೆಯಾಗಲಿ ಆ ಮೇಲೆ ಹೇಳುವೆ.' ಎಂದು ಯಶೋಧರೆ ನುಡಿದಳು.

'ಡಾಕ್ಟರನನ್ನಾದರೂ ಕರೆತರಲು ಅವರನ್ನು ಎಬ್ಬಿಸುವೆ.' ಎಂದು ತಾಯಿ ಅಂದಳು.

'ಯಾರನ್ನೂ ಎಬ್ಬಿಸಬೇಡ; ಯಾರನ್ನೂ ಕರೆತರಬೇಡ.'

'ನೀನು ಹೀಗೆ ಹಲಬುವದನ್ನು ನಾನು ನೋಡಲಾರೆ' ಎಂದು ನುಡಿದು ಕೋಣೆಯಿಂದ ಹೊರಗೆ ಬಂದು ರಂಗಸ್ವಾಮಿಯನ್ನು ಎಬ್ಬಿಸಲು ಹೋದಳು.

ಕೋಣೆಯ ಬಾಗಿಲಲ್ಲಿಯೇ ನಿಂತು 'ಸ್ವಲ್ಪ ಏಳುವಿರಾ, ಯಶೋಧರೆಗೆ ಜಡ್ಡಾಗಿರುವದು' ಎಂದು ಮೂರು ನಾಲ್ಕು ಸಲ ಮೆಲ್ಲಗೆ ನುಡಿದಳು. ಆ ರಂಗಸ್ವಾಮಿಗೆ ಇಷ್ಟು ಮೆಲ್ಲಗಿನ ಮಾತು ಎಲ್ಲಿ ಹತ್ತಬೇಕು. ಗೊರಕೆಯ ತಾನವು ಭೈರವಿಯನ್ನು ಮುಟ್ಟಿತ್ತು. ಹೇಗೆ ಎಬ್ಬಿಸಬೇಕೆಂಬ ದಿಗಿಲಿನಲ್ಲಿ ಆಕೆ ಬಿದ್ದಳು. ಹಾಸಿಗೆಯ ಸಮೀಪಕ್ಕೆ ಹೋಗಿ ರಂಗಸ್ವಾಮಿಯ ದೇಹವನ್ನು ಮುಟ್ಟಿ ಎಬ್ಬಿಸಲು ಪ್ರಯತ್ನ ಮಾಡಿದಳು. ಮಗಳ ವೇದನೆಯ ಸ್ವರವು ಅವಳ ಕಿವಿಗೆ ಬಡೆದಂತೆ ಆಕೆ ಗಾಬರಿಯಾಗಿ ನಿಂತುಕೊಂಡಳು. ಧೈರ್ಯ ತಾಳಿ ಗಟ್ಟಿಯಾಗಿ ಕೂಗಿ ಬಿಟ್ಟಳು. ರಂಗಸ್ವಾಮಿ 'ಯಾರ ?' ಎಂದು ಅರೆನಿದ್ದೆಯಲ್ಲಿ ಕೇಳಿದನು.

'ಯಶೋಧರೆಗೆ ಜಡ್ಡಾಗಿರುವದು ಸ್ವಲ್ಪ ಏಳುವಿರಾ' ಎಂದು ಮೆಲ್ಲಗೆ ನುಡಿದಳು.

'ಮುಂಜಾವಿನಲ್ಲಿ ನೋಡೋಣವಂತೆ' ಎಂದು ನುಡಿದು ರಂಗಸ್ವಾಮಿ ಮೋರೆ ಮುಸುಕು ಹಾಕಿಕೊಂಡು ಮಲಗಿಕೊಂಡನು.

‘ ಜಡ್ಡು ಬಹಳೇ ಆಗಿರುವದು. ಏಳಬೇಕು ’

‘ ಸ್ವಲ್ಪ ಅಫು ಕೊಡು, ನಿದ್ರೆ ತಾನೇ ಹತ್ತುವದು. ಬೆಳಗಿನಲ್ಲಿ ಡಾಕ್ಟರನ್ನು ಕರೆತರೋಣ.’

‘ ಇಲ್ಲ ಸ್ವಲ್ಪ ಏಳಬೇಕು. ಅವಳಿಗೆ ವಿಪರೀತ ಜಡ್ಡು ಆಗಿರುವದು.’

ಆಕಳಿಸುತ್ತ ಮಂಗಸ್ವಾಮಿ ಎದ್ದು ಕುಳಿತನು. ‘ ಏನು ಜಡ್ಡಾಗಿರುವದು. ’ ಎಂದು ಸಿಗರೇಟನ್ನು ಹಚ್ಚಿ ಹೊಗೆ ಬಿಡುತ್ತ ಕೇಳಿದನು.

‘ ಅವಳಿಗೆ ಹೊಟ್ಟೆಯ ವೇದನೆಯೇ ಬಹಳವಾಗಿರುವದು. ’

‘ ಬಹಳ ತಿಂದಿರಬಹುದು. ’

‘ ಇಂದು ಸಂಜೆಯ ಆರು ಗಂಟೆಯಿಂದ ಬಹಳೇ ಚಡಪಡಿಸುವಳು ’

‘ ನಾನು ಬಂದ ಕಾಲಕ್ಕೆ ಏನೂ ಹೇಳಲಿಲ್ಲ. ’

‘ ತಾವು ಕಚೇರಿಯಿಂದ ದಣಿದು ಬಂದಿದ್ದಿರೆಂದು ನಾನು ಹೇಳುವದನ್ನು ಬಿಗಿ ಹಿಡಿದೆ.

‘ ಇಷ್ಟು ರಾತ್ರಿಯಲ್ಲಿ ಡಾಕ್ಟರರು ಬರುವರೋ. ’

‘ ನಿಮ್ಮ ಆಪ್ತನೊಬ್ಬ ಊರಲ್ಲಿ ಡಾಕ್ಟರನಿರುವನಲ್ಲ. ’

‘ ಆತ ತೀರ ಸೊಕ್ಕಿನವನು. ’

‘ ಹುಡುಗಿಯ ಪ್ರಾಣ ಹೋಗುವದು. ಯಾರನ್ನಾದರೂ ಕರೆತರಬೇಕು. ’

ಮಂಗಸ್ವಾಮಿ ಸಿಗರೇಟು ಸೇದುತ್ತ ಕೋಣೆಯಿಂದ ಹೊರಗೆ ಬಂದನು. ಮಗಳ ವೇದನೆಯ ದನಿಯನ್ನು ಕೇಳಿದನು. ಸಿಗರೇಟನ್ನು ಅಲ್ಲಿಯೇ ಚೆಲ್ಲಿದನು. ತಲೆತುರಿಸಿಕೊಳ್ಳುತ್ತ ಪಡಸಾಲೆಯಲ್ಲಿ ಬಂದು ಒಂದು ಕುರ್ಚಿಯ ಮೇಲೆ ಕುಳಿತುಕೊಂಡನು. ‘ ನನ್ನ ಕೋಟು ಟೊಪ್ಪಿಗೆಯನ್ನು ತಾ’ ಎಂದು ಹೆಂಡತಿಗೆ ಹೇಳಿ ಮತ್ತೊಂದು ಸಿಗರೇಟು ಹಚ್ಚಿ ಸೇದುತ್ತ ಕುಳಿತುಕೊಂಡನು.

ಯಾರನ್ನು ಕರೆತರಬೇಕೆಂದು ಆತ ವಿಚಾರ ಮಾಡುತ್ತ ಕುಳಿತುಕೊಂಡನು. ಯಶೋಧರೆ ‘ ಅಮ್ಮಾ ಅಮ್ಮಾ ’ ಎಂದು ಉಸಿರು ಬಿಡದೆ ಹಲುಬುತ್ತಿದ್ದಳು. ‘ ಅವಳಿಗೆ ಕಾಫೀಯನ್ನಾದರೂ ಮಾಡಿಕೊಡು. ನಾನು

ಈಗ ಡಾಕ್ಟರನ್ನು ಕರೆದುಕೊಂಡು ಬರುವೆ.' ಎಂದು ಮಂಗಸ್ವಾಮಿ ನುಡಿದು ಯಶೋಧರೆಯ ಕೋಣೆಯ ಬಾಗಿಲಕ್ಕೆ ಬಂದು ನಿಂತನು. ಮಗಳು ಉರುಳಾಡುವದನ್ನು ಕಂಡು ಆತನ ಕಣ್ಣುಗಳಿಂದ ನೀರಿನ ಹನಿಗಳು ಉದುರಿದವು. 'ಏನಾಗಿರುವದೇ ಯೇಸೂ' ಎಂದು ಮಂಗಸ್ವಾಮಿ ಕೇಳಿದನು. ತಂದೆಯ ಮಾತಿಗೆ ಆವಳು ಉತ್ತರವೇ ಕೊಡಲಿಲ್ಲ.

'ಮೊದಲು ಡಾಕ್ಟರನನ್ನು ಕರೆದುಕೊಂಡು ಬರಬಾರದೇ, ಮುಂದೆ ಅವಳ ಜಡ್ಡಿನ ವಿಚಾರ ಮಾಡೋಣ' ಎಂದು ಆತನ ಹೆಂಡತಿಯು ನುಡಿದಳು. ಸಿಗರೇಟಿನ ಹೊಗೆಯನ್ನು ರೈಲ ಇಂಜನದಂತೆ ಬಿಡುತ್ತ ಮಂಗಸ್ವಾಮಿ ಡಾಕ್ಟರನನ್ನು ಕರೆತರಲು ಹೊರಹೊರಟನು.

'ರಾತ್ರಿ ಬಹಳವಾಗಿರುವದು ನಾನು ಬರುವವರೆಗೆ ಜಾಗ್ರತೆಯಿಂದ ಇರು. ಬಾಗಿಲವನ್ನು ಗಟ್ಟಿಯಾಗಿ ಇಕ್ಕಿಕೊಳ್ಳು. ಊರಲ್ಲಿ ಕಳ್ಳರ ಕಾಕರ ಹಾವಳಿ ಹೆಚ್ಚಾಗಿರುವದು.' ಎಂದು ಹೆಂಡತಿಗೆ ಹೇಳಿ ಜನತಾ ಎಕ್ಸಪ್ರೆಸ್ಸದ ವೇಗದಿಂದ ನಡೆದನು.

'ಅಮ್ಮಾ ನನ್ನನ್ನು ಬದುಕಿಸಬೇಡ. ಬದುಕಿ ಮಾಡುವದಾದರೂ ಅಷ್ಟೇ. ಜನರಲ್ಲಿ ಹಾಸ್ಯಕ್ಕೆ ಗುರಿಯಾಗುವೆನು.' ಎಂದು ಯಶೋಧರೆ ತಮ್ಮ ಅಮ್ಮನಿಗೆ ನುಡಿದಳು.

'ಮನುಷ್ಯನಿಗೆ ಜಡ್ಡಾಗಬಾರದೇ ಜಡ್ಡಿನಿಂದ ಉಳಿಯಬಾರದೇ ಇದೆಲ್ಲಿಯ ನ್ಯಾಯ ಯೇಸೂ' ಎಂದು ಆವಳು ಕಣ್ಣು ಒರಸಿಕೊಳ್ಳುತ್ತ ಮಗಳಿಗೆ ಮೆಲ್ಲಗೆ ಹೇಳಿದಳು.

'ಎಲ್ಲರೂ ಮಾಡತಕ್ಕದ್ದನ್ನು ನಾನು ಮಾಡಿದೆ. ಅದು ಹೀಗೆ ಆಗುವದೆಂದು ನನಗೆ ಅನಿಸಿದ್ದಿಲ್ಲ.

'ಏನು ಮಾಡಿರುವಿ, ನನಗೆ ಗೊತ್ತಿಲ್ಲದ್ದನ್ನು ಏನು ಮಾಡಿರುವಿ ;'

'ಹುಟ್ಟಿದ್ದಕ್ಕೆ ಮಾಡತಕ್ಕದ್ದನ್ನು ನಾನು ಮಾಡಿದೆ.'

'ಏನು ಮಾಡಿದ್ದಾದರೂ ಹೇಳು.'

'ಮಾಡುವ ಮುಂದೆ ನಾಚಿಕೆ ಬರಲಿಲ್ಲ. ಹೇಳಲು ಮಾತ್ರ .....'

'ಕರುಳಿನ ಎದುರಿಗೆ ನಿನ್ನ ನಾಚಿಕೆಯೇ ?'

'ಮಾನವನ ನೈಜ ಸ್ವಭಾವಕ್ಕೆ ಅನುಸರಿಸಿ ನಡೆದದ್ದೇ ನೀತಿ ಬಿಟ್ಟದ್ದೇ ಅನೀತಿ ಎಂದು ಭಾವಿಸಿದೆ. ಸ್ವಾರ್ಥಕ್ಕೆ ಕಟ್ಟಳೆಯನ್ನು ಹಾಕಿ ಅದಕ್ಕೆ ನೀತಿಯೆಂದು ಅನ್ನುವರು ಅದನ್ನು ನಾನು ಮುರಿದೆ.'

'ನೀನು ಇಷ್ಟು ಹೇಳಿದ್ದು ನನಗೆ ತಿಳಿಯದ ವಿಷಯ ಮಗು. ನಾನೇನು ಓದಲಿಲ್ಲ, ಬರೆಯಲಿಲ್ಲ; ಶಾಲೆಯ ಕಟ್ಟೇಕಲ್ಲು ಹತ್ತಲಿಲ್ಲ. ನನಗೆ ನೀತಿ ಅನೀತಿಗಳೆಂಬುವದು ಏನೂ ಗೊತ್ತಿಲ್ಲ. ನನ್ನ ಅಮ್ಮ, ಅಜ್ಜಿ, ಮುತ್ತಜ್ಜಿ ಇವರು ನಡೆದು ಹೋದ ಹಾದಿಯಲ್ಲಿಯೇ ಹೋಗಬೇಕೆಂಬುವದು ನನಗೆ ಗೊತ್ತು. ಅದರ ಹೊರತು ಬೇರೆ ಹಾದಿ ನಾನರಿಯೆ.'

'ಅಯ್ಯೋ, ಅಯ್ಯೋ, ಉಸ್ಸ! ಉಸ್ಸ!' ಎಂದು ಉರುಳಾಡುತ್ತ 'ಅಮ್ಮಾ ನೀನು ಬಹು ಮುಗ್ಧೆ. ನಿನ್ನದೇ ಚಂಚಲ ಸ್ವಭಾವವಾಗಿದ್ದರೆ ನನಗೆ ಜಡ್ಡು ಬರುತ್ತಿದ್ದಿಲ್ಲ' ಯಶೋಧರೆ ತನ್ನ ತಾಯಿಗೆ ಹೇಳಿದಳು.

'ಮಗು ನಿನ್ನ ಜಡ್ಡು ಕಡಿಮೆಯಾಗಲಿ. ನನ್ನ ತಪ್ಪಿಗಾಗಿ ಯಲ್ಲಮ್ಮನಿಗೆ ನಾಲ್ಕು ಶುಕ್ರವಾರ ಉಪ್ಪಿಲ್ಲದ ಉಪವಾಸ ಮಾಡುವೆ. ಮುಂದಾದರೂ ನಾನು ಚಂಚಲ ಬುದ್ಧಿಯವಳಾಗಬಹುದು.'

'ನೀರಿನಲ್ಲಿ ಹರಿಯುವ ಗುಣವಿದ್ದಂತೆ ಮನುಷ್ಯನ ಸ್ವಭಾವದಲ್ಲಿ ಹರಿಯುವ ಗುಣವಿರುವದು.'

'ಹರಿಯುವ ನೀರನ್ನು ತಡೆದು ನಾವು ಉಪಯೋಗ ಮಾಡಿಕೊಳ್ಳುವೆವು. ಹಾಗೆ ಹರಿಯಗೊಟ್ಟರೆ ನೀರಿನಿಂದ ನಮಗೆ ಪ್ರಯೋಜನವಾಗಲಾರದು.'

ಹರಿಯಗೊಟ್ಟರೆ ಸಮುದ್ರಕ್ಕೆ ಕೂಡಿ ಗಾಂಭೀರ್ಯವನ್ನು ತಾಳುವದು; ಕೆಲವು ಕಾಲದಲ್ಲಿ ಉಗಿಯಾಗಿ ನೀಲಾಂಬರವನ್ನು ನೇರಿ ಮೋಡಗಳಲ್ಲಿ ಅನಂತ ರೂಪಗಳನ್ನು ಧಾರಣ ಮಾಡುವದು. ಇದೇ ಮನುಷ್ಯನ ಸ್ವಭಾವ.

'ನೀತಿ ಅನೀತಿಯೆಂಬ ಭಾವದಿಂದಲೇ ತಡೆ ಹಾಕುವದು.'

'ಇಂತಹ ಜಡ್ಡಿನಲ್ಲಿ ನೀನು ಇಂದು ಹೀಗೇಕೆ ಮಾತನಾಡುವಿ?'

'ಬೇಡೆಂದರೆ ಬಿಟ್ಟೆ. ನಿನ್ನ ಎದುರಿಗೆ ನಾನು ನನ್ನ ತಪ್ಪನ್ನು ಹೇಳದಿದ್ದರೆ ಮತ್ತಾರ ಮುಂದೆ ಹೇಳಬೇಕು?'

'ಏನು ನಿನ್ನ ತಪ್ಪಾಗಿರುವದು ಹೇಳು. ನನ್ನ ಮುದ್ದು ಯಶೋಧರೆ ತಪ್ಪು ಮಾಡುವದೇ ಇಲ್ಲ.'

'ತಾಯಿಗೆ ನಾನು ಮುದ್ದು; ಜನಗಳಿಗೆ ನಾನು ಮುದ್ದೇನು?'

'ಜಡ್ಡು ಕಡಿಮೆಯಾಗಲಿ ಆ ಮೇಲೆ ನಿನ್ನ ತಪ್ಪನ್ನು ನನಗೆ ಹೇಳು.'

ಹೊರಗೆ ಸಪ್ಪಳವಾದಂತಾಯಿತು. ಅವಳ ಅಮ್ಮ ರಂಗಸ್ವಾಮಿ ಡಾಕ್ಟರನ್ನು ಕರೆದುಕೊಂಡು ಬಂದನೆಂದು ಭಾವಿಸಿ ಹೊರಗೆ ಬಂದಳು. ಮುಂಚಿನ ಬಾಗಿಲನ್ನು ತೆಗೆದು ಕೈಯಲ್ಲಿ ದೀಪವನ್ನು ಹಿಡಿದುಕೊಂಡು ನಿಂತಳು. ಐದಾರು ನಿಮಿಷ ದಾರಿ ನೋಡಿದಳು. ಯಾರ ಸುಳಿವೂ ಇಲ್ಲ. ಬೀದಿಯಲ್ಲಿ ಯಾರದೋ ಕಾರು ಹೋಗಿರಬಹುದೆಂದು ಒಳಗೆ ಬಂದು ಬಾಗಿಲನ್ನು ಇಕ್ಕಿಕೊಂಡಳು.

'ಯೇಸೂ ಕಠೂ Moon Light fine' ಎಂದು ಯಾರೋ ನುಡಿದಂತೆ ಅವಳಿಗೆ ಕೇಳಿಸಿತು.

'ಯಾರು?' ಎಂದು ಕೇಳಿದಳು.

ಯಾರು ಉತ್ತರವನ್ನು ಕೊಡಬೇಕು.

ಮಗಳ ಕೋಣೆಗೆ ತಿರುಗಿ ಬಂದು ಯಾರೋ ನಿನ್ನನ್ನು ಕೂಗಿದ ಹಾಗಾಯಿತು. ಯಾರು ಅವರು' ಎಂದು ಮಗಳನ್ನು ಕೇಳಿದಳು.

'ಮನುಷ್ಯನ ಮೂರ್ಖತನಕ್ಕೆ ಮಿತಿಯುಂಟು; ಗತಿಯುಂಟು. ದಿನಾಲು ಅದೇ ವೇಳೆ. ಅದೇ ಮಾತು. ಹರಿಯುವ ಸ್ವಭಾವವಲ್ಲ; ಮಂಜು ಮುಸುಕಿದ ಸ್ವಭಾವ. ಆ ಸ್ವಭಾವವನ್ನು ಮಾನವನ ಸ್ವಭಾವವೆಂದು ಭಾವಿಸಿ ಮತ್ತೆ ಬಂದಿರುವನು. Moon Light ಅಲ್ಲ Swoon Light. ಅಮ್ಮಾ ಮೊದಲು ಈ ಕೋಣೆಯ ಕಿಡಿಕಿಯನ್ನು ಇಕ್ಕು' ಎಂದು ಆರ್ಭಟದಿಂದ ವೇದನೆಯನ್ನು ಕೂಡ ಲೆಕ್ಕಿಸದೆ ಯಶೋಧರೆ ತನ್ನ ತಾಯಿಗೆ ಹೇಳಿದಳು.

'ಯಾರು ಯೇಸೂ ಯಾರ ಕೂಡ ಮಾತನಾಡುವಿ.'

'ಮೊದಲು ಕಿಟಕಿಯನ್ನು ಇಕ್ಕು.'

‘ ಹೊರಗೆ ಯಾರಿರುವರು ? ’

‘ ಯಾರಿದ್ದರೇನು ? ಮೊದಲು ಇಕ್ಕು ’

‘ ನಿನ್ನಲ್ಲಿ ಭೂತ ಸಂಚಾರವಾಗಿಲ್ಲವೇ ? ನನ್ನ ಮುದ್ದು ಮಗಳಿಗೆ ಎಲ್ಲಿಯ ಭೂತ ಬಡಿದಿರುವದೋ ’ ಎಂದು ಆಕೆ ದುಃಖಿಸಹತ್ತಿದಳು.

‘ ಅವ್ವಾ ಮೊದಲು ಕಿಡಿಕಿಯನ್ನು ಮುಚ್ಚು. ’

ಮಗಳಿಗೆ ಸನ್ನಿ ಹಿಡಿಯಿತೆಂದು ಅವಳು ಅಳಹತ್ತಿದಳು.

‘ ಸ್ವಲ್ಪ ತಾಳು ಯಶೋಧರೆ. ಒಲೆಯಲ್ಲಿಯ ಬೇಸಿ ಬೂದಿಯನ್ನು ತಾಪು ನಿನ್ನ ಕಾಲುಗಳಿಗೆ ತಿಕ್ಕುವೆ. ಸನ್ನಿಯಾದರೂ ಇಳಿಯಬಹುದು. ನಿಂಬೀಹಣ್ಣನ್ನು ನಿವಾಳಿಸಿ ಒಗೆಯುವೆ. ಭೂತ ಸಂಚಾರ ಹೋಗಬಹುದು’ ಎಂದು ಅವಳ ತಾಯಿ ನಾಗವೇಣಿ ಮೆಲ್ಲಗೆ ನುಡಿದಳು.

‘ ನನಗೆ ಸನ್ನಿ ಹಿಡಿದಿಲ್ಲ. ಭೂತ ಸಂಚಾರ ಮಾತ್ರವಾಗಿರುವದು. ’

‘ ಎಲ್ಲಿಯ ಭೂತ ! ಎಲ್ಲಿ ಬಡಿಯಿತು ? ಬಡಿದದ್ದು ಹೆಣ್ಣೋ ಗಂಡೋ ? ’

‘ ಹೆಣ್ಣೂ ಅಲ್ಲ; ಗಂಡೂ ಅಲ್ಲ; ಜೀವನದ ಭೂತ ಬಡಿದಿರುವದು ’

‘ ಜೀವನದ ಭೂತವೆಂಬುವದನ್ನು ನಾನು ಕೇಳಿಲ್ಲ. ’

‘ ದಿನಾಲು ಈ ಭೂತವನ್ನು ನೋಡುವಿ. ಮಾತನಾಡುವಿ; ’

‘ ನಾನು ಅದನ್ನು ನೋಡಿಯೇ ಇಲ್ಲ. ಏನು ಹೇಳಲಿ. ಅದರ ಕಣ್ಣುಗಳು ನೆತ್ತಿಯ ಮೇಲೆ ಇರುವವೋ ? ’

‘ ಅದಕ್ಕೆ ಕಣ್ಣುಗಳೇ ಇರುವದಿಲ್ಲ. ದೇಹದ ಪ್ರತಿಯೊಂದು ರಂಧ್ರದಿಂದ ಅದು ನೋಡುವದು. ಕಂಡದಕ್ಕೆ ಹಾತೊರೆಯುವದು. ಕಾಣದ್ದಕ್ಕೆ ವಿಚಾರದಿಂದ ಮಿಡುಕುವದು. ’

‘ ಇದೆಂತಹ ಭೂತ ! ’

‘ ಎಲ್ಲರಲ್ಲಿಯೂ ಇರತಕ್ಕ ಭೂತ. ಅದಕ್ಕೆ ವಯಸ್ಸಿಲ್ಲ; ಕಾಲವಿಲ್ಲ; ಮಾನವಿಲ್ಲ. ಜೀವನದಲ್ಲಿಯೇ ಬೆರೆತು ಕುಣಿದಾಡುವ ಭೂತ. ’

‘ ನಿನ್ನ ಮಾತು ಅರಿತುಕೊಳ್ಳುವದು ನನಗೆ ಕಠಿಣವಾಯಿತು. ’

‘ ಕಠಿಣವಲ್ಲಮ್ಮ, ನೀನು ವಿಚಾರ ಮಾಡಿಲ್ಲ. ’

'ನನಗೆ ವಿಚಾರ ಮಾಡುವದೇ ಬೇಡ.'

'ಅಮ್ಮಾ ಈ ವೇದನೆ ತಡೆಯಲಾರೆ' ಎಂದು ಉರುಳಾಡಹತ್ತಿದಳು. 'ಸ್ವಲ್ಪ ಧೈರ್ಯ ತೆಗೆದುಕೊಳ್ಳು. ಡಾಕ್ಟರರು ಈಗ ಬರಬಹುದು.' ಎಂದು ನಾಗವೇಣಿ ಮಗಳಿಗೆ ಹೇಳಿ ಮಂಗಸ್ವಾಮಿಯ ದಾರಿಯನ್ನು ನೋಡಲು ಕೋಣೆಯಿಂದ ಹೊರಗೆ ಬಂದಳು. 'ಹೋಗಿ ಅರ್ಧ ಗಂಟೆಯಾದರೂ ಇನ್ನೂ ಬರಬಾರದೇ? ಇವರಿಗೆ ಹೊತ್ತು ವೇಳೆಯೇ ಗೊತ್ತಾಗುವದಿಲ್ಲ.'

ಎಂದು ವಟಗುಡುತ್ತ ಮುಂಚಿನ ಬಾಗಿಲನ್ನು ತೆಗೆದು ಹೊರಗೆ ನಿಂತು ಕೊಂಡಳು. ಯಶೋಧರೆಯ ಕೋಣೆಯ ಸಮೀಪಕ್ಕೆ ಯಾರೋ ಅಲೆದಾಡಿ ದಂತೆ ಅವಳಿಗೆ ಸಪ್ಪಳ ಕೇಳಿಸಿತು.

'ಯೇಸೂ Moon Light pleasant' ಎಂದು ಯಾರೋ ಕೂಗಿ ದಂತೆ ನಾಗವೇಣಿಗೆ ಕೇಳಿಸಿತು.

'ಯಾರು ಕೂಗಿದವರು?' ಎಂದು ಕೇಳಿದಳು.

ಉತ್ತರ ಯಾರು ಕೊಡಬೇಕು? ಕೂಟ್ಟರೆ ಯಶೋಧರೆ ಒಬ್ಬಳೇ. ಕೋಣೆಗೆ ಬಂದು ಯಾರೋ ಕೂಗಿದಂತಾಯಿತೆಂದು ಮಗಳಿಗೆ ಹೇಳಿದಳು. 'ನಾನೇನು ಕೇಳಲಿಲ್ಲ' ಎಂದು ಮಗಳು ಉತ್ತರ ಕೊಟ್ಟಳು.

'ಮನೆಯಲ್ಲಿ ಭೂತ ಸಂಚಾರವಾಗಿರುವದು. ಅವರು ಬರುವವರೆಗೆ ನೆರೆಮನೆಯ ವೀಣಾಕ್ಷನನ್ನು ಜತೆಗೆ ಕರೆದುಕೊಂಡು ಬರುವೆ' ಎಂದು ನಾಗವೇಣಿ ಯಶೋಧರೆಗೆ ಹೇಳಿದಳು.

'ಯಾರನ್ನೂ ಕರೆತರುವದು ಬೇಡ. ಯಾರು ಬಂದು ಏನುಮಾಡು ವರು. ನನ್ನದು ತಪ್ಪಾಗಿದ್ದರೆ ನೀನು ಮಾತ್ರ ಕ್ಷಮಿಸಬೇಕು.'

'ನೀನು ತಪ್ಪು ಮಾಡುವದೇ ಇಲ್ಲ.'

'ಮಾಡಿದ್ದರೆ'

'ತಾಯಿ ಕ್ಷಮಿಸದಿದ್ದರೆ ಮತ್ತಾರು ಕ್ಷಮಿಸಬೇಕು.'

'ಡಾಕ್ಟರರು ಬಂದರು' ಎಂದು ಪಡಸಾಲೆಯಲ್ಲಿ ಬಂದು ಮಂಗ ಸ್ವಾಮಿಯು ನುಡಿದನು.

ನಾಗವೇಣಿಯು ದೀಪವನ್ನು ಹಿಡಿದುಕೊಂಡು ಹೊರಗೆ ಬಂದಳು. 'ನಿನಗೆ ಮುಂಚಿನ ಬಾಗಿಲವನ್ನು ಇಕ್ಕಿಕೊಳ್ಳು ಅಂತ ನಾವು ಹೇಳಿದ್ದೆ.

ನೀನು ಮರೆತು ಬಿಟ್ಟೆ. ಊರಲ್ಲಿ ಕಳ್ಳರ ಕಾಕರ ಹಾವಳಿ ಅಂತ ಹೇಳಿ ಹೋಗಿದ್ದೆ.' ಎಂದು ಮಂಗಸ್ವಾಮಿ ಹೆಂಡತಿಗೆ ನುಡಿದನು. 'ವ.ನೆಯಲ್ಲಿ ಭೂತದ ಬಾಧೆ ಆಗಿರುವದೆಂದು ನೆರೆಮನೆಯ ವೀಣಾಕ್ಕನನ್ನು ನೀವು ಬರುವವರೆಗೆ ಕರೆಯಬೇಕೆಂದು ವಿಚಾರ ಮಾಡುತ್ತ ಹೊರಗೆ ನಿಂತು ಏನೋ ಸಪ್ಪಳ ಕೇಳಿ ಮತ್ತೆ ಒಳಗೆ ಬಂದಿದ್ದೆ. ಬಾಗಿಲವನ್ನು ಗಟ್ಟಿಯಾಗಿ ಇಕ್ಕಿಕೊಂಡಿದ್ದೆ' ಎಂದು ನಾಗವೇಣಿ ಮಂಗಸ್ವಾಮಿಗೆ ಹೇಳಿದಳು.

ಡಾಕ್ಟರರು ತಮ್ಮ Visit Bag ನ್ನು ಹಿಡಿದು ಕೊಂಡು ಒಳಗೆ ಬಂದರು. 'ಏನಾಗಿರುವದು ಯಶೋಧರೆಗೆ' ಎಂದು ಕೇಳಿದರು. 'ಇಲ್ಲಿ ಕೋಣೆಯಲ್ಲಿ ಇರುವಳು' ಎಂದು ಮಂಗಸ್ವಾಮಿ ಆತನನ್ನು ಒಳಗೆ ಕರೆದು ಕೊಂಡು ಹೋದನು. ಯಶೋಧರೆಯ ಸ್ಥಿತಿಯನ್ನು ನೋಡಿ ಆತ ಅವಳ ತಲೆಪತಾಯಿಗಳಿಗೆ ಹೊರಗೆ ಹೋಗಲು ಹೇಳಿದನು. 'ಅವಳಿಗೆ ವೇದನೆ ಕಡಿಮೆಯಾಗಿ ನಿದ್ದೆ ಬರುವ ಹಾಗೆ ಒಂದು Injuction ಕೊಡಿರಿ' ಎಂದು ಮಂಗಸ್ವಾಮಿ ಹೇಳಿ ಹೊರಗೆ ಬಂದನು. ಡಾಕ್ಟರನು ಮಂಗಸ್ವಾಮಿಯ ದೂರಿನ ನೆಂಟನು. ಒಂದೇ ಊರಲ್ಲಿದ್ದರೂ ಎಳೆಂಟು ವರುಷಗಳಾದರೂ ಆತ ಇವರ ಮನೆಗೆ ಬಂದಿದ್ದಿಲ್ಲ. ಅಸ್ತವ್ಯಸ್ತವಾಗಿ ಬಿದ್ದ ಕೇಶ ರಾಶಿ; ಹಂಬೇಹಣ್ಣಿನ ವೈಲಣ್ಣು; ತುಟಿಚಂಡಿನ ಎದೆಗಳು;— ಯಶೋಧರೆಯ ಮೋಹಕ ರೂಪವನ್ನು ನೋಡಿ ಡಾಕ್ಟರನು ಚಕಿತನಾಗಿ ಬಲಗೈಯಲ್ಲಿಯ Bagನ್ನು ವಿಸ್ಮರಣೆಯಿಂದ ನೆಲಕ್ಕೆ ಬಿಟ್ಟು ಬಿಟ್ಟನು. ಬಿದ್ದ ಸಪ್ಪಳದಿಂದ ಮಂಗಸ್ವಾಮಿ ಗಾಬರಿಯಾಗಿ ಕೋಣೆಯಲ್ಲಿ ಓಡಿ ಬಂದನು. 'ಕೈಜಾರಿ ಬಿತ್ತು' ಎಂದು ಡಾಕ್ಟರನು ಉತ್ತರ ಕೊಟ್ಟನು. ಐದಾರು ನಿಮಿಷ ಅವಳ ದೇಹವನ್ನು ಪರೀಕ್ಷೆ ಮಾಡಿದನು. 'ಏನೂ ಚಿಂತೆ ಮಾಡುವ ಕಾರಣವಿಲ್ಲ. ಇನ್ನೊಂದು ಗಂಟೆಯಲ್ಲಿ ನೆಟ್ಟಗೆ ಆಗುವದು' ಎಂದು ಡಾಕ್ಟರನು ಹೇಳುತ್ತ ಹೊರಗೆ ಬಂದನು.

'ಇನ್ನೊಂದು ಗಂಟೆಯಲ್ಲಿ ನೆಟ್ಟಗಾಗುವದೇ' ಎಂದು ನಾಗವೇಣಿ ಆನಂದದಿಂದ ಕೇಳಿದಳು.

'ಯಶೋಧರೆಯು ಲಗ್ನವಾಗಿ ಎಷ್ಟು ವರುಷಗಳಾದವು?' ಎಂದು ಡಾಕ್ಟರನು ಮೆಲ್ಲಗೆ ಮಂಗಸ್ವಾಮಿಗೆ ಕೇಳಿದನು.

' ಇನ್ನೂ ವರ ಸಿಕ್ಕಿರುವದಿಲ್ಲ. ಅವಳು M A ಮುಗಿಸಿದ ಮೇಲೆ ಅವಳ ಮದುವೆ ಮಾಡಬೇಕೆಂದು ನನ್ನ ವಿಚಾರ.'

' ಏನು ಜಡ್ಡಾಗಿರುವದು ? ' ಎಂದು ನಾಗವೇಣಿ ಕೇಳಿದಳು. '

' ಸಾಮಾನ್ಯ ಜಡ್ಡು. ಎಲ್ಲ ಹೆಂಗಸರಿಗೂ ಆಗತಕ್ಕದ್ದು.

' ಜಡ್ಡಾಗಲಿಕ್ಕೆ ಕಾರಣವೇನು ? ' ಎಂದು ರಂಗಸ್ವಾಮಿ ಕೇಳಿದನು.

' ನಿಸರ್ಗದಾಟ, ತಂದೆತಾಯಿಗಳ ಮೂರ್ಖತನ ' ಡಾಕ್ಟರನು ನುಡಿದನು.

' ಅಂದರೆ ' ರಂಗಸ್ವಾಮಿ ಕೇಳಿದನು.

' Natures game; Parent's stupidity ' ಎಂದು ಡಾಕ್ಟರನು ಉತ್ತರ ಕೊಟ್ಟನು.

' ಇದರ ಅರ್ಥ ನನಗೆ ಹೊಳೆಯಲಿಲ್ಲ ' ಎಂದು ರಂಗಸ್ವಾಮಿ ಹೇಳಿದ.

ಡಾಕ್ಟರನು ರಂಗಸ್ವಾಮಿಯನ್ನು ಮನೆಯ ಹೊರಗೆ ಕರೆದುಕೊಂಡು ಹೋದನು. ' ನಿಮ್ಮ ಮಗಳು ಯಶೋಧರೆಗೆ ಪ್ರಸೂತಿಯ ವೇದನೆ ಯಾಗುತ್ತಿರುವದು. ಇನ್ನೊಂದು ಗಂಟೆಯಲ್ಲಿ ಅವಳು ಹೆರುವಳು. ' ಎಂದು ಹೇಳಿದನು. ಇದನ್ನು ಕೇಳಿ ರಂಗಸ್ವಾಮಿ ಸಿಟ್ಟಿಗೆದ್ದನು. ಮಂಗತನವು ತಲೆಗೇರಿತು. ' ಏನು ಡಾಕ್ಟರರೇ ಏನು ಮಾತನಾಡುವಿರಿ. ನನ್ನ ಮಗಳು ಹಾದರಗಿತ್ತಿಯೋ ಬಸವಿಯೋ ' ಎಂದು ಕಣ್ಣಿನಿಂದ ಕಿಡಿ ಹಾರಿಸುತ್ತ ಹಲ್ಲುಗಳನ್ನು ಕಡಿಯುತ್ತ ಮಂಗಸ್ವಾಮಿ ನುಡಿದನು.

' ಹಾದರಗಿತ್ತಿಯೂ ಅಲ್ಲ ಬಸವಿಯೂ ಅಲ್ಲ; Nature's game ' ಎಂದು ಡಾಕ್ಟರನು ಮೆಲ್ಲಗೆ ಉತ್ತರವನ್ನು ಕೊಟ್ಟನು

ಮಂಗಸ್ವಾಮಿಯು ಡಾಕ್ಟರನನ್ನು ದುರದುರನೆ ಬಿರುಗಣ್ಣಿನಿಂದ ನೋಡಿದನು. ಟೊಡುಗಟ್ಟಿ ಅರ್ಭಟಿಸಿದನು. ಆತನ ಕೋಪವು ನೆತ್ತಿಗೇರಿತು. ಡಾಕ್ಟರನಿಗೆ ಕಪಾಳಮೋಕ್ಷ ಮಾಡಬೇಕೆನ್ನುವ ಸಿಟ್ಟು ಮಂಗಸ್ವಾಮಿಗೆ. ಆದರೆ ಡಾಕ್ಟರು ಕೋಮಲ ಅಂತಃಕರಣದವನು. ತಾಳ್ಮೆಯಿಂದ ಮಂಗ ಸ್ವಾಮಿಯ ಕೆಂಡದಂತಹ ಕೋಪಕಡ್ಡಿ ಮದ್ದನ್ನು ಕೊಡುವಂತಹ ನಯದ

ನುಡಿಗಳನ್ನಾಡಿ ತಿಳಿ ಹೇಳಿದನು. ಒಂದು ವೇಳೆ ನನ್ನ ನಿದಾನವು ತಪ್ಪಿರಬಹುದು. ನನಗೆ ಜಡ್ಡು ನೆಟ್ಟಗೆ ತಿಳಿದಿರಲಿಕ್ಕಿಲ್ಲ. ಈಗ ಹೊಸದಾಗಿ stomach swelling ಎಂಬ ಬೇನೆ ಅಮೇರಿಕೆಯಲ್ಲಿ ಪ್ರಚುರವಿರುವದು. ಅದಾದರೂ ಆಗಿರಬಹುದು. ಅದಕ್ಕೆ Immediate operation ಬೇಕಾಗುವದು.' ಎಂದು ನುಡಿದನು. ಮಂಗಸ್ವಾಮಿ ನಗುತ್ತ 'ಹೀಗೆ ಹಾದಿಗೆ ಬನ್ರಿ ಡಾಕ್ಟರ ಸಾಹೇಬರೇ' ಎಂದು ನುಡಿದನು.

'ಯಶೋಧರೆಯನ್ನು Civil Hospital ಕ್ಕೆ Remove ಮಾಡಿರಿ. ಅಲ್ಲಿಯ ವರೆಗೆ ಬೇಕಾದರೆ ನಾನು ಬಂದು ಹೇಳುವೆ' ಎಂದು ಡಾಕ್ಟರು ಹೇಳಿದನು.

ಮಂಗಸ್ವಾಮಿ ವಿಚಾರದಲ್ಲಿ ಸಿಲುಕಿಬಿದ್ದನು. ಮುಂದೇನು ಮಾಡಬೇಕೆಂದು ಅವನಿಗೆ ತೋಚದಾಯಿತು. ಬಂದ ಸಿಟ್ಟು ಕ್ಷಣದಲ್ಲಿಯೇ ಮಾಯವಾಯಿತು. 'Sorry Doctor' ಎಂದು ಹೇಳಿ ಸುಮ್ಮನೆ ನಿಂತನು. ಯಶೋಧರೆಯ ವೇದನೆಯ ಕೂಗು ಇಬ್ಬರಿಗೂ ಕೇಳಿಸುತ್ತಿತ್ತು.

'ಯಶೋಧರೆಯನ್ನು Civil Hospital ಕ್ಕೆ Remove ಮಾಡಿರೆಂದು ಡಾಕ್ಟರನು ಮತ್ತೆ ಹೇಳಿದನು.

'ಇಂತಹ ಸ್ಥಿತಿಯಲ್ಲಿ ಆಸ್ಪತ್ರಿಗೆ ಕರೆದುಕೊಂಡು ಹೋಗುವ ಬಗೆ ಹೇಗೆ? ಅಲ್ಲಿಯ ವರೆಗೆ ಆವಳು ಬದುಕುವಳೋ ಇಲ್ಲೋ ಅಂಬುವ ಸಂಶಯ. ನನಗೆ ಕರೆದುಕೊಂಡು ಹೋಗಲು ಧೈರ್ಯ ಸಾಲದು' ಎಂದು ಮಂಗಸ್ವಾಮಿಯು ಡಾಕ್ಟರನಿಗೆ ನುಡಿದನು.

'ನೀವು ಏನೂ ಚಿಂತೆಮಾಡಬೇಡಿರಿ. ನನ್ನ Car ಕೊಡುವೆ. ಕರೆದುಕೊಂಡು ಹೋಗಿರಿ.'

ಮಂಗಸ್ವಾಮಿಯು ಒಪ್ಪಿಕೊಂಡು ಡಾಕ್ಟರನ ಇಂಗಿತವನ್ನು ನಾಗವೇಣಿಗೆ ಅರುಹಿದನು. ಎಲ್ಲವನ್ನೂ ಕೇಳಿಕೊಂಡು ಬೆಪ್ಪನೆ ನಿಂತಳು. ಏನು ಮಾತನಾಡಬೇಕೆಂಬುವದು ತೋಚಲಿಲ್ಲ. 'ಏನೇ ಆಗಲಿ, ಮಗಳು ಉಳಿದರೆ ಸಾಕು' ಎಂದು ಗಂಡನಿಗೆ ಹೇಳಿದಳು.

ಯಶೋಧರೆಯನ್ನು ಆಸ್ಪತ್ರೆಗೆ ಕರೆದುಕೊಂಡು ಹೋಗುವ ವ್ಯವಸ್ಥೆಯನ್ನು ಮಂಗಸ್ವಾಮಿಯು ಐದು ನಿಮಿಷದಲ್ಲಿ ಮಾಡಿದನು. ಅವಳನ್ನು ಎತ್ತಿ ಡಾಕ್ಟರನ ಕಾರಿನಲ್ಲಿ ಮಲಗಿಸಿದನು. ಮನೆಗೆ ಬೀಗ ಹಾಕಿಕೊಂಡು ಎಲ್ಲರೂ ಆಸ್ಪತ್ರೆಗೆ ಹೋದರು. ಡಾಕ್ಟರನು ತಾನು ಹಿಂದೆ ಉಳಿಯು ಬೇಕೆಂದು ವಿಶ್ವಪ್ರಯತ್ನ ಪಟ್ಟ. ಮಂಗಸ್ವಾಮಿಯು ಆತನನ್ನು ಒತ್ತಾಯದಿಂದ ಕಾರಿನಲ್ಲಿ ಕುಳ್ಳಿರಿಸಿದನು. ನಿರುಪಾಯನಾಗಿ ಡಾಕ್ಟರನು ಅವರ ಜನ್ನು ಹತ್ತಬೇಕಾಯಿತು. ಆಸ್ಪತ್ರೆಗೆ ಕಾರು ಮುಟ್ಟಿತು. ಡಾಕ್ಟರನೇ ಮೊದಲು ಇಳಿದು ರಾತ್ರಿ ಅಲ್ಲಿದ್ದ House ಡಾಕ್ಟರನಿಗೆ ಥಟ್ಟನಾಗಿ ಯಶೋಧರೆಯನ್ನು Operation ರೂಮಿಗೆ ಕರೆದುಕೊಂಡು ಹೋಗಲು ಅಪ್ಪಣೆಯನ್ನು ಕೊಡಿಸಿದನು. ಅತ್ತ ಯಶೋಧರೆಯನ್ನು ಕರೆದುಕೊಂಡು ಹೋದದ್ದೇ ಒಂದು ಕ್ಷಣ ಇತ್ತ ಡಾಕ್ಟರನು ಮನಸ್ಸಿನಲ್ಲೆ ಮಂಗಸ್ವಾಮಿಗೆ ನಮಸ್ಕಾರ ಮಾಡಿ ತನ್ನ ಕಾರನ್ನು ಬಹು ವೇಗದಿಂದ ಬಿಟ್ಟು ಮನೆಯ ಕಡೆಗೆ ಹೋದನು.

ದಾಯಿಗಳು Operation room ದಲ್ಲಿ ಯಶೋಧರೆಯನ್ನು ಮಲಗಿಸಿದರು. ಅವಳುಟ್ಟ ಎಲ್ಲ ವಸ್ತ್ರಗಳನ್ನು ತೆಗೆದರು. ಮೈಮೇಲೆ ಬೆಳ್ಳಗಿನ ಒಂದು ಅರಿವೆಯನ್ನು ಹೊಚ್ಚಿದರು. ಹೊರಗೆ ಮಂಗಸ್ವಾಮಿ ಮುಗಿಲು ನೋಡುತ್ತ ಕುಳಿತುಕೊಂಡನು. ನಾಗವೇಣಿಯು ಕನ್ನಡಿಯ ಕಿಡಿಕಿಯಲ್ಲಿ ಇಣಕಿ ಹಾಕುತ್ತ ತನ್ನ ಮಗಳನ್ನು ನೋಡುತ್ತ ನಿಂತಳು. 'ಯಶೋಧರೆಯ ಹೊಟ್ಟೆಯನ್ನು ಕೊಯ್ಯುವರೋ ?' ಎಂದು ನಾಗವೇಣಿ ಮಂಗಸ್ವಾಮಿಗೆ ಕೇಳಿದಳು. 'ಏನು ಮಾಡುವರೋ ನೋಡೋಣ' ಎಂದು ನುಡಿದು ಸಿಗರೇಟು ಸೇದುತ್ತ ಕುಳಿತುಕೊಂಡನು. ಡಾಕ್ಟರಿಣಿಯು ಬಂದು ಯಶೋಧರೆಯನ್ನು ಪರೀಕ್ಷೆಮಾಡಿದಳು. ಅವಳು ದಾಯಿಗಳ ಮೇಲೆ ಸಿಟ್ಟಿಗೆದ್ದಳು. ಅವಳನ್ನು Operation room ದಲ್ಲಿ ಮಲಗಿಸಲು ಯಾರು ಅಪ್ಪಣೆಕೊಟ್ಟರೆಂದು ಅಧಿಕಾರವಾಣಿಯಿಂದ ದಾಯಿಗಳಿಗೆ ಗದ್ದರಿಸ ಹತ್ತಿದಳು ದಾಯಿಗಳು ಏನೂ ಉತ್ತರವನ್ನು ಕೊಡಲಿಲ್ಲ. 'This is a case of delivery, ಅವಳಿಗೆ Labour pains, ಬರುವವು' ಎಂದು

ಡಾಕ್ಟರಣಿಯು ದಾಯಿಗಳಿಗೆ ಹೇಳಿದಳು. ಒಳಗಿದ್ದ ಒಬ್ಬ ದಾಯಿಯು ಮೆಲ್ಲಗೆ ಹೊರಗೆ ಬಂದು ನೀವು ಇಂದು ಅಜ್ಜರಾಗುವಿರೆಂದು ಹೇಳಿದಳು. ‘ಮಗಳ ಲಗ್ನವಾಗದೆ ನಾನು ಅಜ್ಜನಾಗುವೆನೇನು? ಅಳಿಯನನ್ನು ಎಲ್ಲಿಂದ ತಂದಿರಿ’ ಎಂದು ಗಾಬರಿಯಾಗಿ ಮಂಗಸ್ವಾಮಿಯು ಕೇಳಿದನು.

‘ಅಳಿಯನಿರದೆ ನಿಮ್ಮ ಮಗಳು ಹೇಗೆ ಹೆರುವಳು. ಅವಳೇನು ಇಪ್ಪತ್ತನೇ ಶತಮಾನದ ಕುಂತಿಯೋ ಅಥವಾ ಮೇರಿಯೋ’ ಎಂದು ದಾಯಿ ಕೇಳಿದಳು.

ಅವಳ ಮಾತುಗಳನ್ನು ಕೇಳಿ ಮಂಗಸ್ವಾಮಿಗೆ ಪರಿಸ್ಥಿತಿಯ ಪ್ರಜ್ಞೆ ಬಂದಿತು. ತಲೆಯಲ್ಲಿ ಸಾವಿರಾರು ವಿಚಾರಗಳು ಏಳುತ್ತಿದ್ದವು. ನಾಗವೇಣಿಯನ್ನು ಎದುರಿಗೆ ಕರೆದು ಕುಳ್ಳಿರಿಸಿಕೊಂಡನು. ತಾಯಿಯ ತಪ್ಪಿಗಾಗಿ ಮಗಳು ಕೆಟ್ಟು ಹೋಗಿರುವಳೆಂದು ತಿಳಿದುಕೊಂಡನು. ತಾನು ದೊಡ್ಡ ಮನೆತನದವನು. ನಿಷ್ಕಲಂಕ ಚಾರಿತ್ರ್ಯವುಳ್ಳವರು ತನ್ನ ಪೂರ್ವಜರು. ತನ್ನ ಕುಲಕ್ಕೆ ಮುಕೋಧರೆ ಕಲಂಕ ತಂದಳು. ಇಷ್ಟೇ ಅಲ್ಲ ಸ್ವರ್ಗದಲ್ಲಿದ್ದ ಪಿತೃ ಮಾತಾಪಿತೃಗಳನ್ನು ರೌರವನರಕದಲ್ಲಿ ದೂಡಿದಳು. ಇದಕ್ಕೆಲ್ಲ ತನ್ನ ಹೆಂಡತಿಯೇ ಕಾರಣ. ಎಂದು ವಿಚಾರಮಾಡುತ್ತ ಎದುರಿಗೆ ಕುಳಿತ ನಾಗವೇಣಿಗೆ ತನ್ನ ಮುಂಗಶಕ್ತಿಯಿಂದ ಕಪಾಳ ಮೋಕ್ಷವನ್ನು ಮಾಡಿದನು. ‘ಯೇಸೂ ಸತ್ತೆ’ ಎಂದು ಕೂಗಿದವಳೇ ನೆಲಕ್ಕೆ ಬಿದ್ದಳು. ಸಮೀಪದಲ್ಲಿಯೇ ರೋಗಿಯಾಗಿದ್ದ ಕೈದಿಯನ್ನು ಕಾಯಲು ಸಿಪಾಯರು ಕುಳಿತುಕೊಂಡಿದ್ದರು. ಒಬ್ಬನು ಈ ಸಪ್ಪಳವನ್ನು ಕೇಳಿ ಗಾಬರಿಯಾಗಿ ನಾಗವೇಣಿ ಬಿದ್ದ ಸ್ಥಳಕ್ಕೆ ಧಾವಿಸಿದನು. ‘ಏನಾಯಿತೆಂದು ಬಂದು ಕೇಳಿದನು. ಕಣ್ಣಿಗೆ ಚಕ್ರ ಬಂದಿತೆಂದು ನಾಗವೇಣಿ ಅವನಿಗೆ ಹೇಳಿದಳು.

ಮಂಗಸ್ವಾಮಿ ಆವೇಶದಿಂದ ಪಾದಗಳನ್ನು ನೆಲಕ್ಕೆ ಬಲವಾಗಿ ಅಪ್ಪಳಿಸುತ್ತ ತಿರುಗಾಡಹತ್ತಿದನು. ಆತನು ಭ್ರಮಿಷ್ಟನಂತೆ ಮಾಡಹತ್ತಿದನು. ನಾಗವೇಣಿಗೆ ಏನೂ ತಿಳಿಯಲಿಲ್ಲ. ಮತ್ತೆ ಕಿಟಕಿಯಲ್ಲಿ ಮಗಳನ್ನು

ನೋಡಲು ಹೋದಳು. ನಾಗವೇಣಿ ಅಲ್ಲಿ ಹೋಗಿ ನಿಂತದ್ದು ಮಂಗಸ್ವಾಮಿಗೆ ಸಹನವಾಗಲಿಲ್ಲ. ಡಾಕ್ಟರಣಿಯು ಕೂಸು ಅಡ್ಡ ಸಿಕ್ಕಿರುವದೆಂದು ಚಡಪಡಿಸ ಹತ್ತಿದಳು House Surgeon ನಿಗೆ ಕರೆಯಲು ಕಳುಹಿಸಿದಳು. ಮಂಗಸ್ವಾಮಿ ಟೊಪ್ಪಿಗೆಯನ್ನು ತೂರುತ್ತ ನಿಂತುಕೊಂಡಿದ್ದನು. ಕರೆಯಲಿಕ್ಕೆ ಹೋಗುತ್ತಿರುವ ದಾಯಿಯು ಕೂಸು ಅಡ್ಡ ಸಿಕ್ಕಿರುವದು Operation ಮಾಡಿ ತೆಗೆಯಬೇಕಾಗುವದು ಎಂದು ಮಂಗಸ್ವಾಮಿಯ ಎದುರಿಗೆ ನುಡಿದು ಹೋದಳು.

ಕೂಸು ಅಡ್ಡ ಸಿಕ್ಕು ಸತ್ತರೆ ನೆಟ್ಟಗೆಂದು ಮಂಗಸ್ವಾಮಿಗೆ ಅನಿಸಿತು. Operation (ಆಪರೇಶನ್) ಮಾಡುವದು ತಡೆಹಿಡಿಯಬೇಕೆಂಬ ವಿಚಾರ ಆತನಲ್ಲಿ ಪ್ರಬಲವಾಗಿ ಬರಹತ್ತಿತು.

ಡಾಕ್ಟರನು ಬಂದನು. Operation (ಆಪರೇಶನ್)ದ ಸಿದ್ಧತೆ ಮಾಡಿದರು. ಗಡಬಡಿಯಿಂದ ಎಲ್ಲರೂ ಓಡಾಡಹತ್ತಿದರು. ನಾಗವೇಣಿ ಅವನ್ನೆಲ್ಲವನ್ನು ಕಂಡು ಕೆಳಗೆ ಕಣ್ಣು ಮುಚ್ಚಿಕೊಂಡು ಕುಳಿತಳು. ಮಂಗಸ್ವಾಮಿ Operation roomದಲ್ಲಿ ಇಣಿಕಿ ಹಾಕಿ ನೋಡಿದ. ಯಶೋಧರೆಯನ್ನು ಕಂಡು ಅವನ ತಲೆ ಮತ್ತಿಷ್ಟು ತಿರುಗಿತು. ಹೇಗಾದರೂ ಮಾಡಿ ಅವಳನ್ನು ಕೊಲ್ಲಬೇಕೆಂಬ ವಿಚಾರ ಆತನ ತಲೆಯಲ್ಲಿ ಸುಳಿಯಹತ್ತಿತು. ಡಾಕ್ಟರನು ಇನ್ನು Operation (ಆಪರೇಶನ್) ಕ್ಕೆ ಸುರುಮಾಡತಕ್ಕವನು. ಯಶೋಧರೆಯ ಹೊಟ್ಟೆಯನ್ನು ನಾಲ್ಕೈದು ಸಲ ಹಿಡಿದು ಬಡಿದು ನೋಡಿದನು. ಆಗ್ಗೆ ಬಂದಿದ್ದ ಪೋಲೀಸನು ಕುತೂಹಲದಿಂದ ಅಲ್ಲಿಯೇ ನಿಂತಿದ್ದನು. ಆತನ ಕೈಯಲ್ಲಿದ್ದ ಗನ್ನು ಬೆಳಕಿನಲ್ಲಿ ಮಂಗಸ್ವಾಮಿಯ ಕಣ್ಣಿಗೆ ಬಿದ್ದಿತು. ಅದನ್ನು ಕಂಡವನೇ ಜೋರಿನಿಂದ ಹೋಗಿ ಪೋಲೀಸನ ಕಪಾಳಕ್ಕೆ ಬಲವಾಗಿ ಏಟು ಬಿಟ್ಟನು. ಕಣ್ಣಿಗೆ ಚಕ್ರಬಂದು ಆತ ನೆಲಕ್ಕೆ ಬೀಳತಕ್ಕವನು. ಆತನ ಕೈಯಲ್ಲಿಯ ಗನ್ನನ್ನು ಮಂಗಸ್ವಾಮಿ ಕಸಿದುಕೊಂಡನು. ಅದನ್ನು ಕೈಯಲ್ಲಿ ತೆಗೆದುಕೊಂಡವನೇ ನಾಲ್ಕು ಸಲ ಧಡಲ್ ಎಂದು ಹಾರಿಸಿದನು. Operation room ದಲ್ಲಿಯ ದೀಪ ಆರಿತು. 'Light ! Light !! (ದೀಪ)' ಎಂದು ಡಾಕ್ಟರನು ಕೂಗಹತ್ತಿದನು.

ಕಗ್ಗತ್ತಲೆ. ಎಲ್ಲರೂ ಗಾಬರಿಯಾಗಿ ನಿಂತರು. ಏನು ಮಾಡಬೇಕೆಂದು ತೋಳೆಯದಾಯಿತು. ’ನನ್ನ ಕೈಗೆ ಏನೋ ಸುತ್ತಿರುವದು Light’ ಎಂದು ಜೋರಿನಿಂದ ಡಾಕ್ಟರನು ಕೂಗಿದನು. ಆಗಲೇ ತಾನು ತಂದಿಟ್ಟಿದ್ದ Battery ನೋಡಿ ಡಾಕ್ಟರಳಿಗೆ ನೆನಪಾಯಿತು. ಕತ್ತಲೆಯಲ್ಲಿ ಮಿಂಚಿನಂತೆ ಧಾವಿಸಿ ಅದನ್ನು ತೆಗೆದುಕೊಂಡನು. ಬೆಳಕು ಕೊಟ್ಟಳು. ಡಾಕ್ಟರನ ಕೈಗೆ ಒಂದು ದೊಡ್ಡ ನಾಗರ ಹಾವು ಸುತ್ತಿದ್ದು ಕಂಡ. ‘ಡಾಕ್ಟರ ನಿಮ್ಮ ಕೈಗೆ ಹಾವು ಸುತ್ತಿರುವದು’ ಎಂದು ಚೀರಿ ಕೈಯಲ್ಲಿಯ Battery ಯನ್ನು ಅಲ್ಲಿಯೇ ಬಿಟ್ಟಳು. ಡಾಕ್ಟರನು ಧಾವಿಸಿ Operation roomದ ಬಾಗಿಲವನ್ನು ತೆಗೆದು ಹೊರಗೆ ಓಡುತ್ತ ಬಂದನು ಕೈಯನ್ನು ಝಾಡಿಸಿದನು. ಹಾವು ಕೆಳಗೆ ಬಿದ್ದು ಹೆಡೆ ತೆಗೆದು ಹರಿದು Operation room ದಲ್ಲಿ ಹೋಯಿತು. ‘My baby’ ಎಂದು ಯಶೋಧರೆ ನುಡಿದಳು.

---

# ಗಂಧದ ಬೆಲೆ

ಮಾರ್ಚ್ ತಿಂಗಳು ಕಳೆದು ಆದೇ ಏಪ್ರೀಲ ಪ್ರಾರಂಭವಾಗಿತ್ತು. ಹತ್ತು ಹನ್ನೆರಡು ವರುಷಗಳಲ್ಲಿ ಇಷ್ಟು ಬಿಸಲಿನ ತಾಪವಿದ್ದಿಲ್ಲೆಂದು ಜನರು ಅನ್ನುತ್ತಿದ್ದರು. ಮಧ್ಯಾಹ್ನ ಎರಡು ಗಂಟೆಯಾಗಿರಬಹುದು. ಬೀದಿಯಲ್ಲಿ ಕಾಲಿಟ್ಟರೆ ಪಾದಗಳು ಹುರುಪಳಿಸುತ್ತಿದ್ದವು. ಬಿಸಿಲಿನ ಬೇಗೆಯನ್ನು ತಾಳಲಾರದೆ ಜನಗಳು ಬಹುತರವಾಗಿ ನೆರಳಿನಾಶ್ರಯವನ್ನು ಹಿಡಿದು ಕೊಳ್ಳುತ್ತಿದ್ದರು. ಒಂದು ಹಣ್ಣಾದ ಮುದುಕಿಯು ಬಾಗಿದ ಟೊಂಕಕ್ಕೆ ಆಶ್ರಯವಿರಲೆಂದು ಗಂಟು ಗಂಟಿನ ಒಂದು ಡೊಂಕಾದ ಬಿದಿರು ಕೋಲನ್ನು ಹಿಡಿದುಕೊಂಡು ಭೂಮಿಯನ್ನು ನುಂಗುವಂತೆ ಒಳನಟ್ಟ ಕಣ್ಣುಗಳನ್ನು ಕೆಳಗೆ ಬಗ್ಗಿಸಿಕೊಂಡು ಉಸ್ಸೆನ್ನುತ್ತ ನಡೆದಿತ್ತು. ದೇಹದ ಚರ್ಮ ಸಾವಿರಾರು ಮಡಿಕೆಗಳಿಗೆ ಇಂಬುಗೊಟ್ಟು ಸವೆದು ಎಲುಬಿನ ಹಂದರವನ್ನು ಮುಚ್ಚಿತ್ತು. ಒಂದು ನಿಮಿಷಕ್ಕೆ ಎರಡು ಸಲವಾದರೂ ನರೆಗೂದಲಿನ ಹಪ್ಪಳದಂತಹ ತಲೆಯು ಅಲೆದಾಡದೆ ಬಿಡುತ್ತಿದ್ದಿಲ್ಲ. ಇಷ್ಟು ಮುಪ್ಪಿನ ಮುದುಕಿಯಾದರೂ ಹಲ್ಲುಗಳು ಸಿಂಪಿನಲ್ಲಿಯ ಮುತ್ತುಗಳಂತೆ ಹೊಳೆಯುತ್ತಿದ್ದವು. ಅವಳು ಉಟ್ಟದ್ದು ತೊಟ್ಟದ್ದು ಮಾನರಕ್ಷಣೆಗಾಗಿ ಎಂದು ಅನ್ನಬಹುದು. ತೊಟ್ಟಿದ್ದರಲ್ಲಿ ನೂರು ಬ್ರಹ್ಮಕಂಬಿಗಳಾದರೆ ಉಟ್ಟಿದ್ದರಲ್ಲಿ ಸಾವಿರ ಬ್ರಹ್ಮಕಂಬಿಗಳಿದ್ದವು. ಭೂಸ ಪೇಟೆಯ ಶಾಮಣ್ಣನ ಕಾಟೇಜಿನ ಮೇಲಕ್ಕೆ ಹಾಗೇ ದಾರಿಯನ್ನು ತುಳಿಯುತ್ತ ನಡೆಯಿತು. ಹತ್ತು ನಿಮಿಷ ಹಾಗೇ ನಡೆಯಿತು; ಮೆಲ್ಲಗೆ ಸಾಗಿತು, ಮುಂದರಿಯಿತು. ಒಂದು ಮೇಲುಪ್ಪರಿಗೆಯ ಮನೆಯ ಮುಂದೆ ನಿಂತು ಇಕ್ಕಿದ ಮುಂಚಿನ ಬಾಗಿಲವನ್ನು ನೋಡಹತ್ತಿತು. ಮುಂಚಿನ ಬಾಗಿಲದ ಬಲಗಡೆಯಲ್ಲಿ ಒಂದು ಎತ್ತರ ಕಟ್ಟೆಯಿತ್ತು. ಅದಕ್ಕೆ ನೆರಳಿನ ಆಶ್ರಯವೂ ಇತ್ತು. ಪಾವಟಿಗೆಗಳನ್ನು ಹತ್ತಿ ಮುಂಚಿನ ಬಾಗಿಲನ್ನು ತಟ್ಟಿ ನೋಡಿತು. ಒಳಗೆ ಬಲ

ಹಾಕಿದ್ದನ್ನು ಕಂಡು ಕಟ್ಟೆಯ ಮೇಲೆ ಕುಳಿತುಕೊಂಡಿತು. ಎದುರಿಗೆ ಮೇಲುಪ್ಪರಿಗೆಗೆ ಹೋಗಲು ಪಾವಟಿಗೆಗಳಿದ್ದವು. ಅವುಗಳನ್ನು ಹತ್ತಿ ಮೇಲೆ ಹೋಗಬೇಕೆಂದು ಅವಳ ಮನದಲ್ಲಿ ಬರಹತ್ತಿತು. ಧೈರ್ಯ ಸಾಲಲಿಲ್ಲ. ಯಾರಾದರೂ ಹೊರಗೆ ಬರಬಹುದೆಂದು ದಾರೀ ಕಾಯುತ್ತ ಕೈಯಲ್ಲಿಯ ಕೋಲಿನಿಂದ ನೆಲವನ್ನು ಕೆದರುತ್ತ ಕುಳಿತುಕೊಂಡಿತು.

'ವಕೀಲರೇ ವಕೀಲರೇ' ಎಂದು ಎರಡು ಮೂರು ಸಲ ಕೂಗಿತು. ಬಹಳೇ ದೊಡ್ಡ ಮನೆ. ಒಳಗಿದ್ದವರಿಗೆ ಮುದುಕಿಯ ಕೂಗು ಹೇಗೆ ಕೇಳಿಸಬೇಕು? ಅವಳ ಕೂಗಿಗೆ ಮಾರುತ್ತರವೇ ಬರಲಿಲ್ಲ. ಸಂಕಟದಲ್ಲಿಯಾದರೂ ವೆಂಕಟರಮಣನನ್ನು ಸಂಕರ್ಷಣ ಭಾವದಿಂದ ನೆನೆದರೆ ಸಂಕಟ ಪರಿಹಾರ ಮಾಡುವನೆಂದು ಹೇಳುವ ವಾಡಿಕೆಯುಂಟು. ಸಂಕಟದಲ್ಲಿದ್ದರೂ ವೆಂಕಟರಮಣನನ್ನು ನೆನೆಯಲಿಲ್ಲ. ಒಳನೆಟ್ಟ ಕಣ್ಣುಗಳಿಂದ ಹೃದಯದ ಕಸವಿಸಿಯಿಂದ, ಧಾರೆಯಾಗಿ ಸುರಿಯುತ್ತಿರುವ ಉಪ್ಪಿನ ಹನಿಗಳಿಂದ ತೊಯ್ದು ನೆನೆದ ತುಟಿಗಳಿಂದ 'ವಕೀಲರೇ, ವಕೀಲರೇ' ಎಂದು ಜಪ ಮಾಡುತ್ತಿತ್ತು. ಎದುರಿಗಿನ್ನ ಮೆಟ್ಟಿಲುಗಳನ್ನು ಹತ್ತಿ ಮೇಲೆ ಹೋಗಿ ಒಂದೆರಡು ಸಲ ವಕೀಲರನ್ನು ಕಂಡು ಮಾತನಾಡಿದ್ದು ಅವಳ ಜ್ಞಾಪಕದಲ್ಲಿ ಇನ್ನೂ ಇತ್ತು. ಹತ್ತಿ ಮೇಲೆ ಹೋಗಬೇಕೆಂಬ ಆಸೆ ಪ್ರಬಲವಾಗಿ ಮುದುಕಿಯನ್ನು ಪೀಡಿಸಹತ್ತಿತು. ಹೋಗಲು ಧೈರ್ಯವಿಲ್ಲ; ಕುಳಿತು ದಾರೀ ನೋಡಲು ಸಮಾಧಾನವಿಲ್ಲ. ಎದ್ದು ನಾಲ್ಕು ಹೆಜ್ಜೆ ಮುಂದೆ ಹೋಗುವದು; ಮತ್ತೆ ತಿರುಗಿ ಬಂದು ಕುಳಿತುಕೊಳ್ಳುವದು—ಹೀಗೆ ಮಾಡಿ ಮಾಡಿ ಬೇಜಾರ ಹತ್ತಿ ಕುಳಿತು ಕೊಂಡಿತು. 'ವಕೀಲರೇ ವಕೀಲರೇ' ಎಂಬ ಜಪ ಮಾತ್ರ ಬಿಟ್ಟಿದ್ದಿಲ್ಲ.

ಮೇಲುಪ್ಪರಿಗೆಯ ನಡುಮನೆಯ ಬಲಗಡೆಗಿದ್ದ ವಿಶಾಲವಾದ ಕೋಣೆಯಲ್ಲಿ ಉದರ ರೋಗದಿಂದ ಬಳಲುತ್ತ ನರಳುತ್ತ ವಕೀಲ ಮಾಧವರಾವ ಮಲಗಿಕೊಂಡಿದ್ದರು. ಉದರರೋಗಕ್ಕೆ ಸಿಕ್ಕು ನಿಧಾನ ಆರು ತಿಂಗಳ ಮೇಲಾಯಿತು. ತಮ್ಮನು ಹೆಸರುವಾಸಿಯಾದ ಡಾಕ್ಟರನಿದ್ದರೂ ರೋಗವು ಇಳಿಮುಖವಾಗಲಿಲ್ಲ. ಜೇಡಿನ ಬಲೆಯಂತೆ ದಿನಾಲು ಪಸರಿಸುತ್ತ ದೇಹದೊಳಗಿನ ಎಲ್ಲ ಕೀಲುಗಳನ್ನು ಸಡಿಲು ಮಾಡುತ್ತಿತ್ತು. ದೊಡ್ಡ

ದೊಡ್ಡ ಪಟ್ಟಣಗಳಲ್ಲಿ ಉದರ ರೋಗದಲ್ಲಿಯೇ ನಿಷ್ಣಾತರಾದ ವೈದ್ಯರಿಗೂ ಡಾಕ್ಟರರಿಗೂ ತೋರಿಸಿದ್ದನು. ಆದರೆ ಯಾರೂ ರೋಗವನ್ನು ಹೋಗ ಲಾಡಿಸಲು ಶಕ್ತರಾಗಲಿಲ್ಲ. ತಮ್ಮನು ಮಾತ್ರ ತುಂಬ ಎದೆಗುಂದಿದ್ದ. ಮಾಧವರಾವ ಇವರು ರೋಗಕ್ಕೂ ಹೆದರಿದ್ದಿಲ್ಲ; ಸಾವಿಗೂ ಬೆದರಿದ್ದಿಲ್ಲ. ತಮ್ಮ ದಿನಚರ್ಯೆಯಲ್ಲಿ ಒಂದೂ ಕಡಿಮೆ ಮಾಡಿದ್ದಿಲ್ಲ. ಒಂದು ಟಿನ್ನ ಸಿಗರೇಟು ದಿನಾಲು ಹೇಗೋ ತೀರಬೇಕು. ಅರ್ಧ ಕಿಟ್ಲಿಯಾದರೂ ಚಹ ಗಂಟಲಕ್ಕೆ ಹಾಕಬೇಕು. ಅವರಿಗೆ ಕೆಳಗೆ ಮುದುಕಿ ಬಂದಿರುವದೆಂದು ಹೇಗೋ ಅನಿಸಿತು. ತಮ್ಮನನ್ನು ಕರೆದು ಮುದುಕಿಯನ್ನು ಮೇಲೆ ಕರೆದುಕೊಂಡು ಬರಲು, ಮಾಧವರಾಯರು ಮಲಗಿಕೊಂಡಲ್ಲಿಯೇ ಹೇಳಿದರು.

ಬೇನೆಯಿಂದ ಬಳಲುವ ಅಣ್ಣನಿಗೆ ಸ್ವಲ್ಪಾದರೂ ವಿಶ್ರಾಂತಿಯನ್ನು ಕೊಡಬೇಕೆಂಬ ಬುದ್ಧಿ ಈ ಜನಗಳಿಗೆ ಹೇಗೆ ಇಲ್ಲವೋ ಎಂದು ಗುಣು ಗುಡುತ್ತ ಕೋದಂಡರಾಯನು ತನ್ನ ದರ್ಪದ ಸ್ವಭಾವವನ್ನು ಪಾದಗಳ ಸಪ್ಪಳದಲ್ಲಿ ತೋರಿಸುತ್ತ ಮೇಲುಪ್ಪರಿಗೆಯ ಪಾವಟಿಗೆಗಳನ್ನು ಇಳಿದು ಕೆಳಗೆ ಬರಹತ್ತಿದನು. 'ಇಷ್ಟು ಮಧ್ಯಾಹ್ನದಲ್ಲಿ ಬಂದವರು ಯಾರು ?' ಎಂದು ಕರ್ಕಶ ದನಿಯಿಂದ ಕೇಳಿದನು. ಆತನ ಬರವನ್ನು ಕಂಡು ಮುದುಕಿಯು ಕೂತ ಸ್ಥಳದಿಂದ ಬಾಗಿದ ಟೊಂಕದ ಮೇಲೆ ತನ್ನ ಎಡಗೈಯನ್ನಿಟ್ಟುಕೊಂಡು ಎದ್ದು ನಿಂತು 'ಅಪ್ಪನವರು ನಾನು' ಎಂದು ಉತ್ತರ ಕೊಟ್ಟಿತು.

'ನಾನು ಅಂದರೆ ಹೆಸರು ದೆಸಿಯು ಏನೂ ಇಲ್ಲವೇ' ಎಂದು ಕೋದಂಡರಾಯ ಎದುರಿಗೆ ಬಂದು ಕೇಳಿದನು.

'ನಾ, ಯಪ್ಪ ಭೈರೂನ ಯವ್ವ.'

'ಶನೀ ಬಂದಹಾಗೆ ಬಿಸಲಲ್ಲಿ ಯಾಕೆ ಬಂದಿದ್ದಿ ?'

'ಯಪ್ಪ ಅವರ ಕಡಿಗೆ ತುಸು ದಗದ ಇತ್ತು.'

'ಯಪ್ಪಗ ಜಡ್ಡು ಆಗೇದ, ದಗದ ಇಲ್ಲ ಗಿಗದಿಲ್ಲ ಹೋಗು; ಪಾವಟಿಗೆ ಬಿಟ್ಟು ಕೆಳಗೆ ಇಳಿ ಮೊದಲು.' ಎಂದು ಬಲವಾಗಿ ಗರ್ಜಿಸಿದನು.

ಕಣ್ಣೀರಿನ ಹನಿಗಳನ್ನು ಒರಸಿಕೊಳ್ಳುತ್ತ 'ಅಪ್ಪ ಅವರನ್ನು ತುಸು ಕಂಡು ಹೋಗತೀನಿ' ಎಂದು ಮುದುಕಿಯು ಅಂಗಲಾಚಿ ಹೇಳಿಕೊಂಡಿತು.

ಅಣ್ಣಾನ ಬೇನೆಯ ಚಿಂತಾಜನಕ ಪರಿಸ್ಥಿತಿಯನ್ನು ಕಂಡು ಕೋದಂಡರಾಯನು ತೀರ ವ್ಯಾಕುಲ ಮನಸ್ಸಿನವನಾಗಿದ್ದರಿಂದ ಸಿಟ್ಟು ಹಾಗೂ ದರ್ಪಗಳು ಕೂಡಿ ಗೊಗ್ಗ್ರದ ದನಿಯಿಂದ ಮುದುಕಿಯ ಮೇಲೆ ಅರ್ಭಟಿಸಿದನು. ಆತನ ಅರ್ಭಟ ನೋಡಿ ಮುದುಕಿ ನಡುಗಿತು. ನಿಮಿಷಕ್ಕೆ ಎರಡು ಮೂರು ಸಲ ಅಗಳಾಡುವ ತಲೆಯು ಹೃದಯದಲ್ಲಿಯ ಆಶೆಗಳಿಗೆ ಧಕ್ಕೆ ಬಡಿದದ್ದರಿಂದ ಇಮ್ಮಡಿ ಜೋರಿನಿಂದ ಹಾಗೂ ವೇಗದಿಂದ ಅಗಳಾಡಹತ್ತಿತು. ತನ್ನ ಸೆರಗಿನ ಬ್ರಹ್ಮಕಂಬಿಯಲ್ಲಿ ಕಟ್ಟಿದ ನೋಟಿನ ಪುಡುಕಿಯ ಗಂಟನ್ನು ಹಿಡಿದು 'ಯಪ್ಪ ದೊಡ್ಡ ಯಪ್ಪಾಗ ಇಷ್ಟು ರುಪಾಯಿ ಕೊಟ್ಟು ಹೋಗತೀನಿ' ಎಂದು ಮುದುಕಿಯು ಹೇಳಿಕೊಂಡಿತು.

ಮಾಧವರಾವ ವಿಶಾಲ ಹೃದಯದವ, ದಾನಿ. ಪರರ ದುಃಖಕ್ಕೆ ಬೆಣ್ಣೆಯ ಹಾಗೆ ಕರಗುವ ಮನಸ್ಸು. ಕೋದಂಡರಾಯನ ಹೃದಯ ಸಂಕುಚಿತ, ರೊಕ್ಕಕ್ಕೂ ಜೀವನಕ್ಕೂ ಕಗ್ಗಂಟು. ಆ ಕಗ್ಗಂಟಿನಲ್ಲಿ ಸಿಕ್ಕು ಪ್ರಾಣ ಹೋದರೂ ಚಿಂತೆಯಿಲ್ಲ ಹಣ ಮಾತ್ರ ಉಳಿಯಬೇಕೆಂಬ ಧ್ಯೇಯ ಕೋದಂಡರಾಯನದು. ಅಣ್ಣತಂಮಂದಿರ ಸ್ವಭಾವದಲ್ಲಿಯೂ, ಹಾಗೂ ಜೀವನವನ್ನು ನಿರೀಕ್ಷಿಸುವದರಲ್ಲಿಯೂ ಬಹಳ ವೈಷಮ್ಯವಿತ್ತು. ಒಂದೇ ತಾಯಿಯ ಒಡಲಿನಿಂದ ಬಂದಿದ್ದರೂ ಇದು ಪ್ರಕೃತಿಯ ವೈಚಿತ್ರ್ಯ.

ಮುದುಕಿಯು ಬಹಳ ಪರಿಯಿಂದ ಅಂಗಲಾಚಿ ಹೇಳಿಕೊಂಡರೂ ಕೋದಂಡರಾಯನ ಮನಸ್ಸು ಕರಗಲಿಲ್ಲ. ಅಣ್ಣಾನ ಬೇನೆಯ ಸಲುವಾಗಿ ಯಃರೇನಿಯಮ್'ದ ಅಂಕವಿದ್ದ ಕಲ್ಲಿನಂತೆ ಆತನ ಮನಸಾಗಿತ್ತು. ಮಲಗಿಕೊಂಡಲ್ಲಿಯೇ ಮಾಧವರಾವ ಎಲ್ಲ ಮಾತುಗಳನ್ನು ಕೇಳಿದ್ದ. ತಮ್ಮ ಆಳು ಮಗನಾದ ಅಬ್ದುಲನನ್ನು ಕರೆದು ಕೆಳಗೆ ಹೋಗಿ ಆ ಮುದುಕಿಯನ್ನು ಮೇಲೆ ಕರೆತರಲು ಹೇಳಿದನು. ಅಬ್ದುಲನು ಕೆಳಗಿಳಿದು ಬಂದು ತನ್ನ ಯಜಮಾನನಾದ ಕೋದಂಡರಾಯನಿಗೆ ಹೇಳಿದ. ಸಿಡಿಮಿಡಿ ಮಾಡುತ್ತ ಆತ ಮೇಲೆ ಹೋಗಿ ಬಿಟ್ಟ. ಅಬ್ದುಲನು ಆ ಮುದುಕಿಯನ್ನು ಕೈಹಿಡಿದು

ಮೇಲಕ್ಕೆ ಕರೆದುಕೊಂಡು ಬಂದನು. ಮಾಧವರಾವ ಇವರ ಕೃಶವಾದ ಶರೀರವನ್ನು ಕಂಡು ಗಾಬರಿಯಾಯಿತು. ತನ್ನ ಸಮೀಪಕ್ಕೆ ಬಂದು ಕುಳಿತು ಕೊಳ್ಳಲು ಆತ ಅವಳಿಗೆ ಹೇಳಿದನು. ತನ್ನ ಸೀರೆಯ ಸೆರಗಿನಲ್ಲಿಯ ನೋಟಿನ ಪುಡುಕಿಗಳನ್ನು ತೆಗೆದು ಮಾಧವರಾಯರ ಮುಂದಿಟ್ಟು ಸಾಷ್ಟಾಂಗ ನಮಸ್ಕಾರ ಮಾಡಿತು. ಎದ್ದು ಕುಳಿತು 'ಯಪ್ಪಾ ನಿನಗೆ ಕೊಡೂದು ನಾಲ್ಕು ವರಾ ರೂಪಾಯಿ ಉಳಿದಿತ್ತು. ಹತ್ತು ದಿವಸದ ಹಿಂದೆ ತಂದು ಕೊಡತೇನಿ ಅಂತ ಹೇಳಿದ್ದೆ. ಮನ್ಯಾಗ ಏನೂ ಇದ್ದಿದ್ದಿಲ್ಲ. ಇದ್ದ ಎರಡು ಹೋತುಗಳನ್ನು ಮೊನ್ನೆ ಸಂತೆಯಲ್ಲಿ ಮಾರಿ ಈ ರೂಪಾಯಿ ತಂದೀನಿ, ತಗೋಬೇಕು' ಎಂದು ಹೇಳಿತು

ಮಾಧವರಾಯನು ಮಲಕೊಂಡಲ್ಲಿಯೇ ಹಣವನ್ನು ನೋಡಿದನು. 'ನಿಮ್ಮ ಫೀ ಮುಟ್ಟಿತು ಯಪ.' ಎಂದು ಮುದುಕಿ ನುಡಿಯಿತು.

'ನನ್ನ ಫೀ ಎಂದೋ ಮುಟ್ಟಿರುವದು.'

'ಇಷ್ಟು ಬಾಕೀ ಉಳಿದಿತ್ತು.'

'ಇರಲಿ. ಆ ರೂಪಾಯಿಗಳನ್ನು ಉಡಿಯಲ್ಲಿ ತೆಗೆದುಕೋ.'

'ಯಾಕೆ ಯಪ್ಪ? ರೂಪಾಯಿ ಕಡಿಮೆಯಾದವೋ? ನನ್ನ ಮಗ ಬಟ್ಟ ಒಂದ ಮೇಲೆ ಎಲ್ಲಿಯಾದರೂ ದುಡಿದು ನಿಂದು ರಿಣಾ ತೀರಿಸತಾನ. ಇದ್ದೊಬ್ಬ ಮಗನನ್ನು ನೀ ಬದಕ್ಸ್ತೀ ಅಂತ ನಿನ್ನ ಕಡಿಗೆ ಒಪ್ಪಿಸೇನಿ ಹದಿನೆಂಟು ಮಕ್ಕಳನ್ನು ಹಡೆದೆಯಪ್ಪ. ಶಿವಾ ಎಲ್ಲಾ ಕಸಕೊಂಡು ಹೋಗಿ ಇದೊಂದು ಬಿಡಿ ಬಿಟ್ಟ್ಯಾನ. ಇದನ್ನೂ ಚಿವುಟಬಾರದೆಂದು ಅಂವಗ ಹೇಳಕೋಂಬೂದು. ನನ್ನ ಶಿವ ನೀನೇ. ಭೈರೂನ ರಟ್ಟೆ ಗಟ್ಟಿ ಅವ. ನಿಮ್ಮ ರಿಣಾ ದುಡಿದು ತೀರಿಸತಾನ.'

'ಈಗ ಫೀ ಮಾತೇ ಬಂದಿಲ್ಲ; ಮುದಕಿ.'

'ಮತ್ತೇನಂದರೆ? ನೋಡಯಪ್ಪ ಎಲ್ಲಾ ನಿನ್ನಕಿ ಕೂಡೇದ ಕುಡಗೋಲು ಕುಂಟಳಕಾಯಿ ನಿನ್ನ ಕೈಯಾಗ ಕೊಟ್ಟೇನಿ. ರಕ್ತ ಅಂದರ ಭೈರೂ ನಾಲ್ಕು ಹಾರಿಕೆ ಹಾರುವವ, ಖೂನೀ ಮಾಡ್ಯಾನ ಅಂತ ಸುಳ್ಳ ಸುಳ್ಳೇ ಊರ ಗವಡರು ತುಫಾವತ ಹಾಕಿ ಖಟ್ಲೆ ಹಾಕ್ಯಾರ. ಬೇಕಾದ್ರ

ಬದುಕಿಸು; ಸಾಕಾದರ ಕೊಲ್ಲು. ಎಲ್ಲಾ ನಿನ್ನ ಕೂಡೇದ' ಎಂದು ಮುದುಕಿಯು ಕನಿಕರ ಬರುವಂತೆ ಹೇಳಿಕೊಂಡಿತು.

'ಕಚೇರಿಗೆ ಹೋಗಿ ನಡಿಸುವಷ್ಟು ಶಕ್ತಿ ನನ್ನಲ್ಲಿ ಇಲ್ಲ. ನಾನು ಇನ್ನೊಬ್ಬ ವಕೀಲರಿಗೆ ಹೇಳಿ ಅವರ ಫೀಯನ್ನು ನಾನು ಕೊಡುವೆ. ನಿನ್ನ ಮಗನ್ನ ಉಳಿಸಿಕೊಳ್ಳುವ ಹಾಗೆ ನಾನು ಅವರಿಗೆ ಹೇಳುವೆ. ಚಿಂತೆಮಾಡ ಬೇಡ' ಎಂದು ಮಾಧವರಾಯರು ಹೇಳಿದರು.

ಕೋಣೆಯ ಹೊರಗೆ ಕೇಳುತ್ತ ನಿಂತ ಕೋದಂಡರಾಯನು 'ಏ ಮುದುಕೀ ಹೊರಗ ಹೋಗು' ಎಂದು ಗದ್ದರಿಸಿದನು. ಕೆಳಗೆ ಹೋಗಲು ಮಾಧವರಾಯರು ತಮ್ಮನಿಗೆ ಹೇಳಿದರು. ಅಣ್ಣನೆದುರಿಗೆ ತಮ್ಮನ ಎಲ್ಲ ದರ್ಪ ಸಿಟ್ಟು ಎಲ್ಲವೂ ಶೂನ್ಯ ಅಂಶಕ್ಕೆ ಬರುತ್ತಿದ್ದವು. ನಿರುಪಾಯನಾಗಿ ಕೋದಂಡರಾಯನು ಕೆಳಗಿಳಿದು ಹೋದನು.

'ಈ ಊರಾಗ ಎಷ್ಟೋ ವಕೀಲ್ರು ಇರುವರು. ಅದು ನಾ ತಗೊಂಡು ಏನು ಮಾಡಲಿ? ನಿನ್ನ ನಂಬಿ ನಾ ಬಂದೀನಿ. ನನ್ನ ಮಗ ಉಳೀತಿದ್ದರ ನಿನ್ನ ಕೈಯಿಂದ ಉಳಿಲಿ; ಸಾಯತ್ತಿದ್ದರೂ ನಿನ್ನ ಕೈಯಿಂದ ಸಾಯಲಿ. ನಿನ್ನ ಕೈಯಿಂದ ಸತ್ತರ, ಯತ್ನ ನನಗೆ ಶಕ್ತಿ ಮೀರಿ ಮಾಡಿದೆ, ಶಿವನ ಮನಸ್ಸಿಗೆ ಬರಲಿಲ್ಲ ಅಂತ ಮನಸ್ಸಿಗೆ ಸಮಾಧಾನ ಹಚ್ಚಿಕೋತೀನಿ. ಮಗನ್ನ ಉಳಿಸತೀನಿ ಅಂತ ಒಂದು ತಿಂಗಳ ಹಿಂದೆ ನಾ ಬಂದಾಗ ನೀ ಹೇಳಿದಿ. ಅದು ಶಿವನ ನುಡಿ ಅಂತ ತಿಳಿದು ಡೊಕ್ಕಿಯ ಕೊಕ್ಕಿಯಲ್ಲಿ ಸಿಕ್ಕ ಜೀವ ಹಿಡಿದುಕೊಂಡು ಇದ್ದೀನಿ. ನೀ ಹೀಂಗ ಅಂದ್ರ ನನ್ನ ಮಗ ಹೋದ ಅಂತ ತಿಳಿತೀನಿ. ಈ ರೂಪಾಯಿ ತಗೋ ಅಂದರ ನಿನಗೆ ಕೊಡತು ವದು ಐದು ನೂರು ರುಪಾಯಿ ಮುಟ್ಟಿತ. ಈಗ ನಾಲ್ಕು ವರಾ ಅವ.'

'ನಿನ್ನ ಫೀ ಬೇಕಾಗಿಲ್ಲ. ರುಪಾಯ ತಗೋ.'

'ದೇವರಿಗೆ ಕಾಯಿ ಒಡಿಸಿದರೆ ಫಲಾ ಕೊಡತಾನ. ನಿನ್ನ ಫೀ ನೀ ತಗೋ.'

'ಡಾಕ್ಟರರು ಎದ್ದು ನನಗೆ ಹೊರಗೆ ಹೋಗಬೇಡೆಂದು ಹೇಳಿರುವರು'

'ಶಿವಾನ ಮನಸ್ಸಿನಲ್ಲಿ ನೀನೇ ನಡಿಸುವದಿದ್ದರೆ ನಿನ್ನ ಜಡ್ಡು ಕಡಿಮೆ ಯಾಗಬಹುದು. ನಿನಗೆ ಶಕ್ತಿ ಇದ್ದರ ನಡಿಸು. ಇಲ್ಲದಿದ್ದರ ಬಿಡು.'

'ನಿನ್ನ ಮಗನ ಬಿಟ್ಟೀದ ಕಾಗದವನ್ನೇ ನಾನು ಓದಿಲ್ಲ. ಏನು ನಡಿಸಲಿ.'

'ಕಚೇರ್ಯಾಗ ನಿಂತ ಕಾಲಕ್ಕೆ ದೇವರು ನಿನಗೆ ಏನು ಬುದ್ಧಿ ಕೊಡ ತಾನ ಅದನ್ನು ಮಾತನಾಡು. ಅಷ್ಟು ಸಾಕು.'

'ಎಂದು ಅದ ಮುದ್ದತ?'

"ನಾಳೆ ಅದ. ಇದೇ ಕಚೇರಿಯಿಂದ ಬಂದೆ. ನಾಳೆ ನಡೀತದ ಅಂತ ಹೇಳಿದರು."

ಮಾಧವರಾಯರು ವಿಚಾರ ಮಾಡುತ್ತ ಮಲಕೊಂಡರು. ಏನೂ ಉತ್ತರವನ್ನೇ ಕೊಡಲಿಲ್ಲ. ಕಚೇರಿಯ ವರೆಗೆ ಹೋಗಿ ತಾನು ನಡಿಸಿ ಬರುವಷ್ಟು ಶಕ್ತಿ ತನ್ನಲ್ಲಿ ಬರುವದೋ ಇಲ್ಲೋ ಎಂಬ ಸಂಶಯ ಬಲವಾಗಿ ಆತನನ್ನು ಆವರಿಸಿಕೊಂಡಿತು. ಆತನಿಗೆ ಎದ್ದು ಕುಳಿತುಕೊಳ್ಳಲು ತ್ರಾಣ ವಿಲ್ಲ. ಇಷ್ಟು ಅಶಕ್ತನಾದರೂ ಸಿಗರೇಟಿನ ಹೊಗೆಯು ಹಾಗೇ ಒಂದೇ ಸವನೇ ಬಾಯಿಂದ ಹೋಗುತ್ತಿತ್ತು. ಐದು ನಿಮಿಷ ಮುದುಕಿಗೆ ಹೊರಗೆ ಕೂಡಲು ಹೇಳಿದನು. ವಿಚಾರ ಮಾಡುತ್ತ ಮಲಗಿಕೊಂಡನು. ಹೊಟ್ಟೆಯ ವೇದನೆಯಿಂದ ಆತನಿಗೆ ಮೂರು ದಿವಸ ನಿದ್ದೆ ಇದ್ದಿಲ್ಲ. ಭೈರೂನ ಮೊಕದ್ದಮೆಯ ಸಂಗತಿಗಳನ್ನು ವಿಚಾರ ಮಾಡುತ್ತ ಮಲಗಿಕೊಂಡನು. ಹೊಗೆ ಬಿಡುತ್ತಿದ್ದ ಸಿಗರೇಟು ಬಲಗೈಯಲ್ಲಿ ಹಾಗೇ ಇತ್ತು. ವಿಚಾರ ಲಹರಿಯಲ್ಲಿ ಮಾಧವರಾಯನಿಗೆ ಸ್ವಲ್ಪ ಜಂಪು ಹತ್ತಿತು. ತಲೆಯನ್ನು ನಡುಗಿಸುತ್ತ ಮುದುಕಿ ಕೋಣೆಯ ಹೊರಬಾಗಿಲಲ್ಲಿ ಕುಳಿತುಕೊಂಡಿತು. ನಿಮಿಷಕ್ಕೆ ಒಂದು ಸಲವಾದರೂ ಕೋಣೆಯಲ್ಲಿ ಮಾಧವರಾಯನನ್ನು ನೋಡಲು ಹಣಿಕಿ ಹಾಕುತ್ತಿತ್ತು. ಆತನು ಏನು ನುಡಿಯುವನೋ ಎಂಬ ಆತುರ. ಕೋದಂಡರಾಯನು ಅಣ್ಣನಿಗೆ ಔಷಧವನ್ನು ಕೊಡಬೇಕೆಂದು ಮೇಲೆ ಬಂದನು. ಮುದುಕಿಯನ್ನು ದುರುದುರುನೆ ನೋಡಿದನು. ಅಣ್ಣನ ಕೋಣೆಯಲ್ಲಿ ಹೋದ. ನಿದ್ರೆ ಹೋದದ್ದು ಕಂಡು ಮಾಧವರಾಯನ ಕೈಯಲ್ಲಿಯ ಸಿಗರೇಟನ್ನು ಮೆಲ್ಲಗೆ ತೆಗೆದು ಕೆಳಗೆ ಒಗೆದನು. ಹೊರಗೆ ಬಂದು ಮುದುಕಿಗೆ 'ಅವರಿಗೆ ನಿದ್ದೆ ಹತ್ತಿರುವದು. ನೀನು ಹೋಗು'

ಎಂದು ಹೇಳಿದನು. ಅವಳು ಏನೂ ಉತ್ತರವೇ ಕೊಡಲಿಲ್ಲ ಕೋಣೆಯ ಬಾಗಿಲನ್ನು ಮೆಲ್ಲಗೆ ಮುಂದು ಮಾಡಿಕೊಂಡನು. ಬಾಗಿಲವನ್ನು ಮುಂದೆ ಮಾಡಬೇಡೆಂದು ಆಕೆ ಕೋದಂಡರಾಯನಿಗೆ ಹೇಳಿದಳು. ಮಾಧವರಾಯನ ಮೊಗವನ್ನಾದರೂ ನಾನು ನೋಡುತ್ತ ಕುಳಿತುಕೊಳ್ಳುವೆ ಎಂದು ಮುದುಕಿ ಅನ್ನಹತ್ತಿತು. ಕೋದಂಡರಾಯನಿಗೆ ಸಿಟ್ಟು ತಲೆಗೇರಹತ್ತಿತು. ಒಳಗೆ ಹೋಗಿ ಅಬ್ದುಲನನ್ನು ಕರೆದರು. ಅವಳನ್ನು ಹೊರಗೆ ದೂಡಲು ಹೇಳಿದರು. ಒಡೆಯನ ಆಜ್ಞೆ ಎಂದು ಅಬ್ದುಲನು ಮುದುಕಿಯ ಕೈಯನ್ನು ಮೇಲಕ್ಕೆಬ್ಬಿಸಿದನು.

'ಯಪ್ಪ ಕೂಡು ಅಂತ ಹೇಳ್ಯಾನ. ನನ್ನ ಹೊರಗ ಹಾಕಬೇಡಿರಿ' ಎಂದು ಮುದುಕಿಯು ಅಂದಿತು.

'ಮೊದಲು ನಡಿ ಹೊರಗ ಅಂತೀನಿ. ದಶ್ಯಾಟಿ ರಂಡಿ, ನಡಿ ಹೊರಗ' ಎಂದು ಕೋದಂಡರಾಯನು ಗದ್ದರಿಸಿದನು.

'ಯಪ್ಪಾ ನನ್ನ ಇವರು ಹೊರಗ ಹಾಕತಾರೋ' ಎಂದು ಕೂಗಿತು.

ಮುದುಕಿಯ ದನಿ ಮಾಧವರಾಯನ ಹೃದಯಕ್ಕೆ ಹೋಗಿ ಬಡಿಯಿತು. ಕನಸು ಕಂಡ ಮಾಧವರಾಯನು ಎಚ್ಚತ್ತು ಗಾಬರಿಯಾಗಿ ತೀಕ್ಷ್ಣ ದೃಷ್ಟಿಯಿಂದ ಕೋಣೆಯನ್ನು ನಿರೀಕ್ಷಿಸಿದನು. 'ಅಬ್ದುಲ' ಎಂದು ಮಲಗಿಕೊಂಡಲ್ಲಿಯೇ ಕೂಗಿದನು. ಅವಳ ಕೈಯನ್ನು ಬಿಟ್ಟು ಅಬ್ದುಲನು ಕೋಣೆಯ ಬಾಗಿಲವನ್ನು ತೆಗೆದು ಒಳಗೆ ಹೋದನು. ಕೋದಂಡರಾಯನು ಹೊರಗೆ ದೂರದಲ್ಲಿ ನಿಂತಿದ್ದನು. 'ಒಳಗೆ ಹೋಗಿ ಐದು ನೂರು ರುಪಾಯಿಗಳನ್ನು ತೆಗೆದುಕೊಂಡು ಬಾ' ಎಂದು ಮಾಧವರಾಯನು ಹೇಳಿದನು. ಇದನ್ನು ತಮ್ಮ ಕೇಳಿದ. ಒಳಗೆ ಹೋಗಿ ರುಪಾಯಿಗಳನ್ನು ಅಬ್ದುಲನ ಕೈಯಲ್ಲಿ ಕೊಟ್ಟನು. ಕೋಣೆಯಲ್ಲಿ ಮುದುಕಿ ಹಣಕಿ ಹಾಕಿತು. 'ಏ ಮುದುಕೀ ಇಲ್ಲಿ ಒಳಗೆ ಬಾ' ಎಂದು ಮಾಧವರಾಯನು ಕರೆದನು. ಗಂಟಿನ ಡೊಂಕು ಕೋಲನ್ನು ತೆಗೆದುಕೊಂಡು ಒಳಗೆ ಹೋಗಿ ನಿಂತಿತು. ಕುಳಿತುಕೊಳ್ಳಲಿಕ್ಕೆ ಸನ್ನೆ ಮಾಡಿದನು. ರುಪಾಯಿಗಳನ್ನು ತೆಗೆದುಕೊಂಡು ಅಬ್ದುಲನು ಬಂದನು. ಮುದುಕಿಗೆ ಕೊಡಲು ಮಾಧವರಾಯನು ಹೇಳಿದನು. ರುಪಾಯಿಗಳನ್ನು ಕೈಯಲ್ಲಿ ತೆಗೆದುಕೊಂಡು 'ಯಾಕ ಯಪ್ಪ

ನನಗೆ ರುಪಾಯಿ' ಎಂದು ಕೇಳಿತು. 'ನೀ ಕೊಟ್ಟ ಫೀಯನ್ನು ಪರ್ತ ತೆಗೆದುಕೊಳ್ಳು. ಬೇರೆ ವಕೀಲರನ್ನು ಕೊಡು' ಎಂದು ಹೇಳಿ ಮಾಧವರಾಯನು ಮುದುಕಿಯ ಕಡೆಗೆ ಬೆನ್ನು ಮಾಡಿಕೊಂಡು ಮಲಗಿಕೊಂಡನು.

'ಕೊಟ್ಟದ್ದು ತಿರುಗಿ ಇಸಕೊಳ್ಳಲಿಕ್ಕೆ ನಾನೇನ ಬಸವಿಯ ಮಗಳಲ್ಲ. ನನ್ನದೂ ಕುಲದ ರಕ್ತವಿರುವದು. ಮಾತು ಆಡಿದರ ಹೋತು, ಮುತ್ತು ಒಡೆದರ ಹೋತು. ಬೇಕಾರ ನಡಿಸು, ಸಾಕಾರ ಬಿಡು. ತಗೋ ನಿನ್ನ ರುಪಾಯಿ' ಎಂದು ಮುದುಕಿಯು ಕೋಣೆಯ ತುಂಬ ನೋಟುಗಳನ್ನು ತೂರಿ ಹೊರಗೆ ಕೋಲೂರುತ್ತ ಬಂದಿತು. ಮಾಧವರಾಯನ ಹಾಸುಗೆಯ ಮೇಲೆ ಕೆಳಗೆ ಎಲ್ಲ ಕಡಿಗೂ ನೋಟುಗಳು ಚದುರಿ ಬಿದ್ದವು.

ಇದನ್ನೆಲ್ಲವನ್ನು ಕೋದಂಡರಾಯನು ನೋಡುತ್ತ ನಿಂತಿದ್ದನು. ಅವಳ ಅಭಿಮಾನವನ್ನು ಕಂಡು ಆತನಿಗೆ ಪಿತ್ತ ತಲೆಗೇರಿತು. ಧಾವಿಸಿ ಹೋಗಿ ಅವಳ ಕೈಯಲ್ಲಿಯ ಕೋಲನ್ನು ಕಸಿದುಕೊಂಡ. ಒಂದು ಚಪ್ಪೆಯ ಮೇಲೆ ಬಿಗಿದ. 'ತಾಯಿಗೆ ಮಗನು ಹೊಡೆದರೆ ಬೇಡೇಕೆ? ಎಮ್ಮೀ ಬುಕ್ಕು ಓದುತ್ತಿದ್ದರೂ ಒಂದು ದಿನ ನನಗೆ ಹೊಡಿಯಲಿಲ್ಲ. ನಿನ್ನ ಮಕ್ಕಳು ತೀರಿಸಲಿ, ಎಂದು ನುಡಿದು ಮುದುಕಿಯು ಹೊರಟಿತು. 'ಕೋದಂಡ, ಮೂರ್ಖ, ಅವಳಿಗೆ ಹೊಡೆದಿಯಾ' ಎಂದು ಮಾಧವರಾಯನು ಒಳಗಿನಿಂದ ಒದರಿದನು. ಕೈಯಲ್ಲಿಯ ಕೋಲನ್ನು ಕೊಡಲು ಕೋದಂಡರಾಯನು ಹೋದನು. ಮಿಂಚಿನಂತೆ ಮುದುಕಿ ಎಲ್ಲಿಯೋ ಮಾಯವಾಯಿತು. ಮಾಧವರಾಯನು ಅಚ್ಯುತನನ್ನು ಕರೆದು 'ಅವಳನ್ನು ಹುಡುಕಿ ಕೋಲನ್ನು ಕೊಟ್ಟು ಬಾ.' ಎಂದು ಹೇಳಿದನು.

× × × ×

ತನ್ನ ಜೀವಮಾನದಲ್ಲಿಯೇ ಎಂದೂ ಅಂತಹ ತರಹದ ಕೋಲನ್ನು ಹಿಡಿಯದ ಮಾಧವರಾಯರು ಇಂದು ಆ ಮುದುಕಿಯ ಗಂಟಿನ ಡೊಂಕು ಕೋಲನ್ನು ಹಿಡಿದುಕೊಂಡು ರೋಗದ ವೇದನೆಯ ಒತ್ತಡವನ್ನು ಅನುಲಕ್ಷಿಸದೆ ಜೀವನದ ಸ್ಫೂರ್ತಿಯ ಕರೆಯಿಂದಲೂ ಆ ಮುದುಕಿಯ ತಾಯ್ತನದ ಕರುಳಿನ ತಳಮಳದ ನೋಟದಿಂದಲೂ ಕಸಿವಿಸಿಗೊಂಡು ತಮ್ಮ

ಜೀವನದಲ್ಲಿ ಇದು ಕೊನೆಯ ಮೊಕದ್ದಮೆಯೆಂದು ನ್ಯಾಯಾಲಯಕ್ಕೆ ಬಂದು ಯಾವದೋ ಒಂದು ಅಗಮ್ಯ ಶಕ್ತಿಯ ಮೇಲೆ ಭಾರ ಹಾಕಿ ಭೈರೂನ ಮೊಕದ್ದಮೆಯನ್ನು ನಡೆಸಿದರು. ಏನು ನಡಿಸಿದರೆಂಬುದು ಅವರಿಗೇ ಹೊಳೆಯಲಿಲ್ಲ. ಹೃದಯದಲ್ಲಿ ಯಾವದೋ ಒಂದು ಶಕ್ತಿ ನಲಿದು ಮಾತನಾಡಿಸುತ್ತಿರುವದೆಂದು ಅವರಿಗೆ ಭಾಸವಾಯಿತು. ಬುದ್ಧಿಯ ಚಳಕದಿಂದ ಇಂದು ಅವರು ಮೊಕದ್ದಮೆಯನ್ನು ನಡಿಸಲಿಲ್ಲ. ನ್ಯಾಯಾಲಯಕ್ಕೆ ಬಂದೊಡನೆ ಅದರ ಹೊರಗಿನ ಆವಾರದಲ್ಲಿ ಮುದುಕಿಯನ್ನು ಕಾಣಬಹುದೆಂಬ ಅಪೇಕ್ಷೆಯಿಂದ ಸೂಕ್ಷ್ಮವಾಗಿ ಎಲ್ಲ ಕಡೆಗೂ ನಿರೀಕ್ಷಿಸಿದರೂ ಕಾಣದೆ ಮುದುಕಿಯ ಮೂರ್ತಿಯೇ ಮಾಯವಾದದ್ದು ಕಂಡು ಮಾಧವರಾಯರ ಹೃದಯದಲ್ಲಿ ಒಂದು ತರಹದ ಅಳುಕುಳಿಯಿತು; ಆದರೆ ಅದರ ಜತೆಗೆ ಹೃದಯದಲ್ಲಿ ಬೆಳಕನ್ನು ಕಂಡರು.

ಮೊಕದ್ದಮೆ ಮುಗಿಯುತ್ತ ಬಂದ ಹಾಗೆ ಅವರ ಪ್ರಜ್ಞೆ ತಪ್ಪಹತ್ತಿತು. ನ್ಯಾಯಾಲಯದಲ್ಲಿ ನೆರೆದ ಜನರು ಮಾಧವರಾಯರು ಇಂದು ಮಾಡಿದ ಅಪಾದನೆಯ ಖಂಡನೆಯನ್ನು ಕಂಡು ಬೆರಳು ಕಚ್ಚಿದರು. ಅಣ್ಣನ ಮೇಲಿನ ಕಳಕಳಿಯಿಂದ ಕೋದಂಡರಾಯನು ತಾನೂ ನ್ಯಾಯಾಲಯಕ್ಕೆ ತನ್ನ ಎಲ್ಲ ಉಪಕರಣಗಳನ್ನು ತೆಗೆದುಕೊಂಡು ಸಮಯಕ್ಕೆ ಇರಲೆಂದು ಬಂದಿದ್ದನು. ಮಾಧವರಾಯನ ಪ್ರಜ್ಞೆ ತಪ್ಪಿದ ಕೂಡಲೇ ಕೋದಂಡರಾಯನು ಕಾರಿನಲ್ಲಿ ಹಾಕಿಕೊಂಡು ಮನೆಗೆ ಬಂದು ಅಣ್ಣನನ್ನು ಮಲಗಿಸಿದನು. ಪರೀಕ್ಷೆ ಮಾಡಿದನು. ರೋಗವು ಕೈಮೀರಿತೆಂದು ಅಂದುಕೊಂಡನು. ಜ್ವರವು ಏರಹತ್ತಿತು. ಇತ್ತ ಕಡೆಯ ಪೂರ್ಣ ಪ್ರಜ್ಞೆಯೇ ಹೋಯಿತು. 'ಹಣ ತಿರುಗಿ ತೆಗೆದುಕೊಳ್ಳಲು ನಾನು ಬಸವಿಯ ಮಗಳಲ್ಲ; ಕುಲದ ರಕ್ತವು ನನ್ನಲ್ಲಿ ಇರುವದು.' ಎಂದು ಮಾಧವರಾಯನು ಬಡಬಡಿಸಹತ್ತಿದನು. 'ಆ ಮುದುಕಿಯ ಕೋಲನ್ನು ಕೊಟ್ಟು ಬಾ ಅಬ್ದುಲ' ಎಂದು ಮೇಲಿಂದ ಮೇಲೆ ಪ್ರಜ್ಞೆಯಿಲ್ಲದೆ ಮಾತನಾಡಹತ್ತಿದ್ದನು.

ಊರಲ್ಲಿಯ ಹೆಸರುವಾಸಿಯಾದ ಡಾಕ್ಟರರನ್ನು ಕೋದಂಡರಾಯನು ಕರೆಯಿಸಿದನು. ಅವರೆಲ್ಲರೂ ಮಾಧವರಾಯನ ಪ್ರಕೃತಿಯನ್ನು

ಪರೀಕ್ಷಿಸಿದರು. ಜಲರೋಗದಲ್ಲಿ ರಕ್ತದ ಒತ್ತಡವೂ ಕೂಡಿರುವದರಿಂದ ಬದುಕುವದು ಕಷ್ಟವೆಂದು ಎಲ್ಲರೂ ಅಭಿಪ್ರಾಯ ಪಟ್ಟರು. ಅಣ್ಣನ ಬದಿಯಲ್ಲಿ ಕುಳಿತ ಕೋದಂಡರಾಯನು ಬೆಳಗಿನ ಎಂಟುಗಂಟೆಯಾದರೂ ಎದ್ದಿದ್ದಿಲ್ಲ. ತನ್ನ ಹೆಂಡತಿಗೆ ಸಮೀಪದಲ್ಲಿ ಕುಳಿತುಕೊಳ್ಳಲು ಹೇಳಿ ಕೋದಂಡರಾಯನು ತನ್ನ ವ್ಯವಸಾಯಕ್ಕೆ ಅಣ್ಣನ ಕೋಣೆಯಿಂದ ಹೊರಬಿದ್ದು ಕೆಳಗಿದ್ದ ತನ್ನ ದವಾಖಾನೆಗೆ ರೋಗಿಗಳನ್ನು ಪರೀಕ್ಷಿಸಲು ಬಂದನು. ಎಷ್ಟು ಹೇಳಿಕೊಂಡರೂ ಮುಂದಿರುವ ರೋಗಿಗಳು ಅವನನ್ನು [illegible] ಒಂದು ಗಂಟೆಯ ವರೆಗೆ ಬಿಡಲಿಲ್ಲ. ನಡುನಡುವೆ ಮೇಲೆ ಹೋಗಿ ನನ್ನು ನೋಡಿಕೊಂಡು ಬರುತ್ತಿದ್ದನು. ಎರಡು ಗಂಟೆಯ ಸುಮಾರು ಅಣ್ಣನಿಗೆ ಬಿಕ್ಕು ಹಿಡಿದಿರುವದೆಂದು ಬಂದು ಹೇಳಿದರು. ಎಲ್ಲರನ್ನೂ ಕಳುಹಿಸಿ ತನ್ನ ದವಾಖಾನೆಯನ್ನು ಇಕ್ಕಿಕೊಂಡು ಅಣ್ಣನ ಬದಿಗೆ ಹೋದನು. ಅಣ್ಣ ಉಳಿಯುವದಿಲ್ಲೆಂದು ನಿರ್ಧರಿಸಿಕೊಂಡನು. ಚಿಕ್ಕಂದಿನಲ್ಲಿ ತಬ್ಬಲಿಯಾಗಿ ಬಡತನದಲ್ಲಿ ಕಾಲಕಳೆದದ್ದನ್ನು ನೆನೆದುಕೊಂಡು ಒತ್ತರದಿಂದ ಬರುತ್ತಿದ್ದ ದುಃಖವನ್ನು ಬಿಗಿಹಿಡಿದುಕೊಂಡು ಕುಳಿತುಕೊಂಡನು. ಎರಡು ಹೊಡೆಯಿತು; ಮೂರು ಹೊಡೆಯಿತು; ನಾಲ್ಕು ಹೊಡೆಯಿತು; ಪ್ರಾಣೋತ್ಕ್ರಮಣವಾಗಲೇ ಇಲ್ಲ. ಹೊರಗೆ ಹೋಗಬೇಕೆಂಬ ಪ್ರಾಣ ತಿರುಗಿ ಹೃದಯಕ್ಕೆ ಓಡುತ್ತಿತ್ತು.

ಹದಿನೈದು ಹದಿನಾರು ತಾಸು ಪ್ರಜ್ಞೆಯಿಲ್ಲದೆ ಮಾಧವರಾಯರಿಗೆ ಸ್ವಲ್ಪ ಪ್ರಜ್ಞೆಯ ಝುಳುಕು ಬಂದಂತಾಗಿ 'ಭೈ....ಬ....ಡ, ಎಂಬ ಮೂರು ಅಕ್ಷರಗಳನ್ನು ಒಡನುಡಿದರು. ಭೈರೂನ ಬಡುಗಡೆ ಆಯಿತೋ ಎಂಬ ಪ್ರಶ್ನೆಯ ಇತ್ಯರ್ಥವಿರುವದೆಂದು ಕೋದಂಡರಾಯನು ಅರಿತುಕೊಂಡನು. ಅದರ ಫಲಿತಾಂಶ ತಿಳಿಯದ ಹೊರತು ಮಾಧವರಾಯನ ಪ್ರಾಣೋತ್ಕ್ರಮಣವಾಗುವದಿಲ್ಲೆಂದು ಅರಿತುಕೊಂಡು, ಕಾರಿನಲ್ಲಿಯೇ ಅಬ್ದುಲನನ್ನು ನ್ಯಾಯಾಲಯಕ್ಕೆ ಕಳುಹಿಸಿ, ಭೈರೂನ ಬಿಡುಗಡೆ ಇದೇ ಆಯಿತೆಂದು ನುಡಿದ ಕ್ಷಣದಲ್ಲಿಯೇ ಬದಿಯಲ್ಲಿದ್ದ ಕೋಲನ್ನೂ ಐದುನೂರು ರೂಪಾಯಿಗಳ ನೋಟಿನ ಪುಡಿಕೆಯನ್ನೂ ಮುದುಕಿಗೆ ಕೊಡಲು ಸನ್ನೆ

ಮಾಡಿ ವಿದುರನಾದ ಮಾಧವರಾಯನು ಜೀವನದ ಯಾತ್ರೆಯನ್ನು ಮುಗಿಸಿದನು.

ಮರಣದ ವಾರ್ತೆ ಒಂದು ಕ್ಷಣದಲ್ಲಿಯೇ ಊರ ತುಂಬ ಹಬ್ಬಿತು. ಕೊನೆಯ ದರ್ಶನಕ್ಕಾಗಿ ಜನರು ಕಿಕ್ಕಿರಿದರು. ಕೆಲವರು ದಾನಿ ಮಾಧವ ರಾಯನೆಂದರೂ, ಮತ್ತೆ ಕೆಲವರು ಸಂಕಟಬಾಂಧವನೆಂದಲೂ ತಮಗೆ ಮಾಡಿದ ಉಪಕಾರಗಳ ಅನುರೂಪವಾಗಿ ಜನರು ಮಾಧವರಾಯನನ್ನು ಹೊಗಳಹತ್ತಿದರು.

ರಾತ್ರಿ ಎಂಟು ಗಂಟೆಯಾದರೂ ದರ್ಶನದ ಯಾತ್ರೆ ನಡೆಯುತಿತ್ತು. ಆಕಾಶದಲ್ಲಿ ಮೋಡಗಳು ಕಲೆತು ಗುಡುಗು ಸಿಡಿಲಿನ ಆರ್ಭಟವಾಗಹತ್ತಿತ್ತು. ಅಂದು ಮೊದಲೇ ಅಮಾವಾಸ್ಯೆ. ಬೀದಿಯಲ್ಲಿಯ ದೀಪಗಳೆಲ್ಲ ಸಿಡಿಲಿನ ಗರ್ಜನೆಯ ಆರ್ಭಟಕ್ಕೆ ಪ್ರಚಂಡ ಮಾರುತನ ವೇಗಕ್ಕೆ ಆರಿ ಹೋದವು. ಮಿಂಚಿದರೆ ಕಾಣಿಸುವದು; ಇಲ್ಲವಾದರೆ ಎಲ್ಲವೂ ಕತ್ತಲೆಯ ಮಡುಕಿನಲ್ಲಿ ಮಾಯ. ನೆರೆದ ಜನರು ದರ್ಶನಕಾರ್ಯ ಮುಗಿಸಿಕೊಂಡೇ ಹೋಗ ಬೇಕೆಂದು ನಿಂತರು.

ಅರಣ್ಯ ಖಾತೆಯ ಕಚೇರಿಯ ಹಿಂಬದಿಯಲ್ಲಿ ಗಂಧದ ಕಟ್ಟಿಗೆಗಳ ಅಪಾರ ಸಂಗ್ರಹವಿರುವದೆಂದು ಬಿಡುಗಡೆ ಹೊಂದಿದ ಭೈರೂ ಅರಿತು ಕೊಂಡು ತಾಯಿಯ ಪ್ರಚೋದನೆಯಿಂದ ತನ್ನನ್ನು ನೋಡಲು ಬಂದ ಊರಿನ ಹಿರಿಗೆಯ ಗೆಳೆಯರನ್ನು ಕರೆದುಕೊಂಡು ಕಗ್ಗತ್ತಲೆಯಲ್ಲಿ ಸ್ಮಶಾನ ದಲ್ಲಿ ಗಂಧದ ಕಟ್ಟಿಗೆಗಳನ್ನು ಎಬ್ಬಿಸಿಕೊಂಡು ರಾಶಿ ಹಾಕಿದನು. ಎಲ್ಲರೂ ಕೂಡಿ ಗಂಧದ ಚಿತೆಯನ್ನು ಕಟ್ಟಿದರು. ಗಂಧದ ಸುಡುವ ಸುವಾಸನೆ ಯನ್ನು ತೆಗೆದುಕೊಂಡು, ಅದನ್ನು ಸ್ಮರಣಪಥದಲ್ಲಿ ತಂದು, ಪಡೆಯುವ ಆನಂದವೇ ಮಾಧವರಾಯನ ಜೀವನದ ಸೊಬಗೆಂದು ತನ್ನ ಮಗನಿಗೆ ಮುದುಕಿಯು ಹೇಳಿತು. ಮಾಧವರಾಯನ ಶವವನ್ನು ದೂರದಲ್ಲಿ ನಿಂತು ನೋಡಿಕೊಂಡು ಬರುವೆನೆಂದು ಹೇಳಿ ಮುದುಕಿ ಅವರ ಮನೆಯ ಕಡೆಗೆ ಹೊರಟಿತು. ಎಳೆಂಟು ನಿಮಿಷಗಳ ಮೇಲೆ ಭೈರೂ ತಾನೂ ನೋಡ ಬೇಕೆಂಬ ಇಚ್ಛೆಯಿಂದ ಮುದುಕಿಯ ದಾರಿಯನ್ನು ಹಿಡಿದನು.

ಕಗ್ಗತ್ತಲೆಯಲ್ಲಿ ಎಡವುತ್ತ ಮುಗ್ಗುತ್ತ ಮುದುಕಿಯು ಮಾಧವರಾಯನ ಮನೆಯ ಮುಂದೆ ಬಂದಿತು. ಗದ್ದಲದಲ್ಲಿ ಹತ್ತಿ ಮೇಲುಪ್ಪರಿಗೆಯ ಮೇಲೆ ಹೋಯಿತು. ಅಲ್ಲಿದ್ದ ಕಟಾಂಜನಕ್ಕೆ ಅತು ನಿಂತುಕೊಂಡಿತು ಹಜಾರದಲ್ಲಿಯ ದೀಪದ ಮಿಂಚುವ ಬೆಳಕಿನಲ್ಲಿ ಕೋದಂಡರಾಯನು ಅಣ್ಣನ ಶವದ ಬಳಿಯಲ್ಲಿ ನಿಂತಲ್ಲಿಯೇ ಮುದುಕಿಯನ್ನು ಕಂಡನು. ಅಣ್ಣನ ಪ್ರಾಣತೆಗೆದುಕೊಂಡ ಮುದುಕಿ ಎಂಬ ಭಾವನೆ ಹೃದಯದ ವಿಕಾರದಲ್ಲಿ ಮೂಡಿ ಕೋದಂಡರಾಯನ ಬುದ್ಧಿಯ ತಾಳತಪ್ಪಿಸಿತು ಸಿಟ್ಟಿನಿಂದ ಉರಿಯುಹತ್ತಿದ. ಅಣ್ಣ ಹೇಳಿದ ಮಾತು ಮರೆತುಬಿಟ್ಟ. ಡೊಂಕುಕೋಲು ಗಂಟಾಗಿಯೇ ಮೂಲೆಯಲ್ಲಿ ಕುಳಿತಿತ್ತು. ನೋಟಿನ ಪುಡಿಕೆಗಳು ಇಟ್ಟಲ್ಲಿಯೇ ಇದ್ದವು. ಕೋದಂಡರಾಯನು ಮುದುಕಿಯ ಒಂದೊಂದೇ ಕೃತಿಯನ್ನು ನೆನಪು ಮಾಡಿಕೊಂಡನು. ಸಿಟ್ಟು ಇಮ್ಮಡಿಯಾಯಿತು ನೆರೆದ ಜನರನ್ನು ಸರಿಸಿ ಅಪ್ಪಗೈಯನ್ನು ಹಚ್ಚಿಕೊಂಡು ಕಣ್ಣೀರು ಸುರಿಸುತ್ತಿದ್ದ ಚಿಂದಿಯ ಮುದುಕಿಯ ಕೈಯನ್ನು ಕೋದಂಡರಾಯನು ಹಿಡಿದು ಮೇಲುಪ್ಪರಿಗೆಯ ಮೇಲಿಂದ ಅವಳನ್ನು ಒಗೆದನು. 'ಮುದುಕಿ ಬಿತ್ತು! ಬಿತ್ತು!' ಎಂದು ಜನರು ಅನ್ನುವದರಲ್ಲಿಯೇ ಅದರ ದೇಹ ಬೀದಿಯ ಮೇಲಿದ್ದ ಕಲ್ಲುಗಳ ಮೇಲೆ ಅಪ್ಪಳಿಸಿ ರಕ್ತದ ಕಾಲುವೆಯನ್ನು ಹರಿಸಿತು. ಕೆಳಗೆ ನೋಡುತ್ತ ನಿಂತಿದ್ದ ಭೈರೂ ಏನೂ ಮಾತನಾಡದೆ ಜನರು ಕಂಡರೋ ಇಲ್ಲೋ ಅನ್ನುವದರಲ್ಲಿಯೇ ರಕ್ತದಿಂದ ತೊಯ್ದು ಬಸಿಯುತ್ತಿದ್ದ ಮುದುಕಿಯನ್ನು ಹೆಗಲಮೇಲೆ ಹಾಕಿಕೊಂಡು ಕತ್ತಲೆಯಲ್ಲಿ ಎಲ್ಲಿಯೋ ಮಾಯವಾದನು. ಡೊಕ್ಕಿಯಲ್ಲಿ ಪ್ರಾಣ ಹಿಡಿದುಕೊಂಡ ಮುದುಕಿಯು ಗಂಧದ ಚಿತೆಯ ಕೆಳಗೆ ಯಾರಿಗೂ ಗೊತ್ತಾಗದಂತೆ ತನ್ನ ದೇಹವನ್ನು ಹಾಕಬೇಕೆಂದು ಹೇಳಿ ಭೈರೂನ ಹೆಗಲ ಮೇಲೆ ಪ್ರಾಣ ಬಿಟ್ಟಳು.

ತಾಯಿಯ ಇಚ್ಛೆಯನ್ನು ಸ್ಮಶಾನಕ್ಕೆ ಬಂದು ಪೂರ್ಣಗೊಳಿಸಿದವು. ತಾಯ್ತನದ ಕರುಳಿನ ಪ್ರೇಮವು ವಿಶ್ವವ್ಯಾಪಿಯಾಗಲು ಮಾಧವರಾಯನನ್ನು ಮುದುಕಿಯು ತನ್ನ ಒಡಲಿನ ಮೇಲೆ ಚಿತೆಯಲ್ಲಿ ತೆಗೆದುಕೊಂಡಿತು.

ರಾತ್ರಿ ಹನ್ನೆರಡು ಗಂಟೆಗೆ ಅಗ್ನಿಸಂಸ್ಕಾರ ಮಾಡಿದರು. ಗಂಧದ ಚಿತೆಯ ಮೇಲೆ ಮಾಧವರಾಯನ ಶವ ಉರಿಯಹತ್ತಿತು. ಅಗ್ನಿಜ್ವಾಲೆ ಪಸರಿಸಿ ಉರಿಯಹತ್ತಿದವು. ಗಂಧದ ಸುವಾಸನೆಯು ಒಂದು ಗಾವುದ ವರೆಗೆ ಹರಡಿತು. ಮಾಧವರಾಯನ ಜೀವನದ ಸೊಬಗು! ಮುದುಕಿಯ ಕರುಳು. ನೆರೆದವರು ಗಂಧವ ಕಟ್ಟಿಗೆಗಳು ಎಲ್ಲಿಂದ ಬಂದವೆಂದು ಆಶ್ಚರ್ಯಪಟ್ಟು ಕೇಳುತ್ತಿದ್ದರು. ಉತ್ತರ ಯಾರು ಹೇಳಬೇಕು? ಅಗ್ನಿನಾರಾಯಣನೇ ಉತ್ತರ ಕೊಡಲು ಸಮರ್ಥ.

ಗಂಧದ ಚಿತೆ*ಯಲ್ಲ; ಕರುಳಿನ ಚಿತೆ.

---

* (ಈ ಕಥೆಯ ತಲೆಬರಹ 'ಗಂಧದ ಚಿಲಿ' ಎಂದು ತಪ್ಪು ಅಚ್ಚಾಗಿದೆ. ಅದನ್ನು 'ಗಂಧದ ಚಿತೆ' ಎಂದು ತಿದ್ದಿಕೊಳ್ಳಬೇಕು)

# ಗ್ರಾಮದ ಆಹುತಿ

ಆಗಲೇ ಸೂರ್ಯ ಮುಳುಗಿದ್ದ. ಸಂಧ್ಯಾರಾಗವು ಮೆಲ್ಲಗೆ ಮೆಲ್ಲಗೆ ಮಾಯವಾಗುತ್ತಾ ಕತ್ತಲೆಗೆ ಸ್ಥಳವನ್ನು ಕೊಡುತ್ತಿತ್ತು. ದನಕರುಗಳು ಧಾವಿಸಿ ಮನೆಯ ಕಡೆಗೆ ಬರುತ್ತಿದ್ದವು. ಮಂಜು ಭಾರವಾದ ಹುಲ್ಲು ಹೊರೆಯನ್ನು ಹೊತ್ತುಕೊಂಡು ಹೊಲದಿಂದ ಆದೇ ಬಂದು ಅದನ್ನು ಹಜಾರದಲ್ಲಿ ಚೆಲ್ಲಿ ಸಂಜೆಯ ಅಡಿಗೆಯ ಸಲುವಾಗಿ ಒಲೆಪುಟ ಮಾಡಲು ಅಡಿಗೆಯ ಮನೆಯಲ್ಲಿ ಹೋದಳು. ಪುಟ ಮಾಡುತ್ತ ಒಲೆಯ ಮುಂದೆ ಕುಳಿತ್ತಿದ್ದಳು. ಹಡಸಾಲೆಯಲ್ಲಿ ಅವಳು ಇನ್ನೂ ದೀಪವನ್ನು ಹಚ್ಚಿದ್ದಿಲ್ಲ. [illegible] ಪೂರ್ಣವಾಗಿ ಕತ್ತಲೆ ಮುಸುಕಿತ್ತು. 'ಮನೆಯಲ್ಲಿ ಯಾರಿದ್ದೀರಿ' ಎಂಬ ಕರ್ಕಶ ಹಾಗೂ ಗೊಗ್ಗರ ದನಿಯಿಂದ 'ಸ್ವ ಪರ್ಶ ಹಾಗೂ ಅಸಂಬದ್ಧಪದಗಳನ್ನು ಹೊರಗೆಡುವುತ್ತ ಮುಂಬಾಗಿಲಲ್ಲಿ ನಿಂತು ಯಾರೋ ಕೂಗಿದರು. ಇದನ್ನು ಕೇಳಿ ಒಳಗಿನಿಂದಲೇ 'ಯಾರು ಅವರು' ಎಂದು ತಿರಸ್ಕಾರದಿಂದ ಮಂಜು ಕೇಳಿದಳು. ಅವಳ ಮಾತು ಅವನಿಗೆ ಕೇಳಲಿಲ್ಲ. ಕೈಯಲ್ಲಿದ್ದ ಕಬ್ಬಿಣದ ಅಣಸಿನ ಬಡಿಗೆಯನ್ನು ಟಿಟ್ ಟಿಟಲ್ ಎಂದು ನೆಲಕ್ಕೆ ಬಡಿಯುತ್ತ 'ಯಾರು ಒಳಗಿದ್ದವರು ಹೊರಗೆ ಬರತೀರೋ ಇಲ್ಲೋ' ಎಂದು ದೊಡ್ಡ ದನಿಯಿಂದ ಕೂಗಿದನು.

'ಯಾರೂ ಇಲ್ಲ ಮುಂದೆ ಹೋಗು' ಎಂದು ಒಳಗಿನಿಂದಲೇ ಮಂಜು ಉತ್ತರ ಕೊಟ್ಟಳು.

'ನಾ ಈ ಊರ ನಂಜ' ಎಂದು ಕೂಗಿದ.

'ಈ ಊರ ನಂಜ ಅಂತ ನಾನೇನು ಕೇಳಲಿಲ್ಲ' ಮುಂದೆ ಹೋಗು.'

'ಹೊರಗೆ ಒಳಗಿದ್ದವರು ಬರದಿದ್ದರೆ ಮನಿಗೆ ಬೆಂಕಿ ಹಚ್ಚತೀನಿ.'

'ಹಲಿ ಸವಾ ಆದನೋ ಕಚ್ಚಿದೋ.'

'ಏ ಛಿಂಗಾಃಃ ಹೊರಗ ಬರತಿಯೋ ಬೆಂಕಿ ಹಚ್ಚಲೋ.'

‘ ಚಲೋ ಉದ್ಯೋಗ ಮಾಡತಿ. ಮನೀ ಬಾಗಿಲ ಬಿಟ್ಟು ಹಾದೀ ಹಿಡಿದು ಹೋಗು. ಬೆಂಕಿ ಹಚ್ಚತಾನ ಅಂತ ಬೆಂಕಿ. ನಿನ್ನನ್ನು ಮನುಷ್ಯರು ಹಡದಿರುವರೋ ಯಾರು ಹಡದಿರುವರು ’

‘ ಕತ್ತಿ ’

‘ ಆತೇ ಕತ್ತಿಯ ಹಾಗೆ ಮಾತನಾಡತಿ’ ಎಂದು ಉತ್ತರ ಕೊಡುತ್ತ ಮಂಜು ಅಡುಗೆಯ ಮನೆಯಿಂದ ದೀಪವನ್ನು ಹಿಡಿದುಕೊಂಡು ಪಡಸಾಲೆಗೆ ಬಂದಳು.

ಕತ್ತಲೆಯಲ್ಲಿ ಮಂಜುನ ರೂಪವನ್ನು ನಂಜ ನೋಡಲಿಲ್ಲ. ಮೀಸೆಯ ತುದಿಯನ್ನು ಎಡಗೈಯಿಂದ ಹುರಿಮಾಡುತ್ತ ‘ ಸಿಂಗ ಎಲ್ಲಿ ಹೋಗಿರುವನು’ ಎಂದು ನಂಜ ಕೇಳಿದನು. ‘ ಅವರೂ ನಿನ್ನ ಹಾಗೆ ಬೆಂಕಿ ಹಚ್ಚಲು ಹೋಗಿರುವರು’ ಎಂದು ನಕ್ಕು ಅಪಹಾಸ್ಯವನ್ನು ವ್ಯಕ್ತಮಾಡಿದಳು. ‘ ಈ ಊರಲ್ಲಿ ನನ್ನ ಹೊರತು ಗಂಡಸರು ಇರುವರೋ ’ ಎಂದು ಮತ್ತನಾಗಿ ಅಹಂಕಾರದಿಂದ ನುಡಿದನು ‘ ನಿನಗೆ ಛಿಕ್ಕಿಯಾದವರು ಇರಲಿಕ್ಕಿಲ್ಲ; ಆಗದವರು ಎಷ್ಟೋ ಜನರು ಇರುವರು’ ಎಂದು ನುಡಿದು ನಡುಮನೆಯ ಕಡೆಗೆ ನಾಲ್ಕು ಹೆಜ್ಜೆ ಹೋದಳು.

‘ ಏ ಬಿಂಕದ ಬಿನ್ನಾಣಿ. ನಿನ್ನ ಗಂಡಗ ಹೇಳು ನಾ ಈಗ ಬರತೀನಿ ಎಂದು, ನೂರು ರೂಪಾಯಿ ಕೊಡು ಅಂತ ಹೇಳು ತಿಳೀತೋ ? ’

‘ ನಿನಗ ಯಾಕ ಕೊಡಬೇಕು ? ’

‘ ನಾನು ಅಂತೀನಿ ಅಂತ ’

‘ ನೀ ಬೇಕಾದ್ದು ಅಂತೀದಿ; ಹೋಗು ರೂಪಾಯಿ ಕೊಡುವದಿಲ್ಲ. ’

‘ ನಂಜ ಒಂದು ಕೇಳಿದ, ಅಂತ ಹೇಳು ಅವ ಕೊಟ್ಟೀ ತೀರತಾನ, ರಾತ್ರಿ ಹತ್ತು ಗಂಟೆಯೊಳಗಾಗಿ ಕೊಡದಿದ್ದರ ನಿಮ್ಮ ಎರಡು ಬಣವೀ ಸುಡತೀನಿ ಅಂತ ಹೇಳು. ’

‘ ಇಂತಹ ಗಂಡಸರು ಈ ಊರಲ್ಲಿ ಯಾರೂ ಇಲ್ಲ. ಇಂತಹ ಹೆಂಗಸರೂ ಯಾರೂ ಇಲ್ಲ ಅಂತ ನನಗೆ ಅನಿಸತದ. ’

‘ ಈ ಊರಿಗೆ ನೀ ಹೊಸದಾಗಿ ಬಂದ ಹುಡುಗೀ ಕಾಣಸತೀದಿ. ’

'ಯಾಕ ?'

'ನಾ ಯಾರು ಅಂಬುವದು ನಿನಗೆ ಗೊತ್ತು ಇಲ್ಲ. ನಾ ಅಂದರ ಮಂದಿ ನಡಗತಾರ.'

'ಹೇಡಿ ನಡಗತಿದ್ದಾವು ?' ಎಂದು ಉತ್ತರ ಕೊಟ್ಟು ಪಡಸಾಲೆಯಲ್ಲಿ ದೀಪವನ್ನು ಹಚ್ಚಿ ಅಡಿಗೆಯ ಮನೆಗೆ ಹೋದಳು.'

ನಂಜ ಕೂಗಿ ಕೂಗಿ ಹಾಗೇ ಹೋದ.

ಐದ ನೂರಕ್ಕನಷ್ಟು ಮಿಕ್ಕದ ಜನವಸತಿಯುಳ್ಳ ಚಿಕ್ಕ ಹಳ್ಳಿ ನರೇಂದ್ರ. ಆದರೂ ದಿನಾಲು ಜೀವನದ ದಿನಚರ್ಯವನ್ನು ಸುಲಭವಾಗಿ ಸಾಗಿಸಲು ಒಂದಿಲ್ಲೊಂದು ಆತಂಕದ ಘಟನೆಗಳನ್ನು ತಂದು ಪ್ರಕ್ಷುಬ್ಧ ವಾತಾವರಣವನ್ನು ನಂಜ ನಿರ್ಮಾಣ ಮಾಡುತ್ತಿದ್ದುದರಿಂದ, ಹೇಗೊ ಒಂದು ದಿನ ಹೋಯಿತೆಂದು ಜನಗಳು ನಿರುತ್ಸಾಹದಿಂದ ಜೀವನವನ್ನು ಸಾಗಿಸುತ್ತಿದ್ದರು. ಆ ಊರ ಕಂಟಕ, ಬಕಾಸುರ ನಂಜ. ಆತನೆಂದರೆ ಆಬಾಲವೃದ್ಧರೆಲ್ಲರೂ ಹೆದರಿ ಸಾಯುತ್ತಿದ್ದರು.

ಹೊಲದಲ್ಲಿಯ ದನಕರುಗಳನ್ನು ಮನೆಗೆ ಹೊಡೆದುಕೊಂಡು ಹೋಗಲು ತಂದೆಯಾದ ಸಂಗನಿಗೆ ಹೇಳಿ ತಾನು ಸ್ವಲ್ಪ ತಡಮಾಡಿ ಮನೆಗೆ ಬರುವೆನೆಂದು ನಿಂಗನು ಹೊಲದಲ್ಲಿಯೇ ಉಳಿದನು. ಮಳೆ ಸಕಾಲಕ್ಕೆ ಬೀಳದ್ದರಿಂದ ಮುಂಗಾರಿಯ ಬೆಳೆ ಬರಲೇ ಇಲ್ಲ. ಹೋದ ವರುಷದಂತೆ ಈ ವರುಷವಾದರೂ ದುಷ್ಕಾಳ ಬೀಳುವದೆಂದು ಆತ ಹೆದರಿದ್ದ. ಹಸ್ತದ ಮಳೆ ಚನ್ನಾಗಿ ಸುರಿದಿದ್ದರಿಂದ ವರದ ಹಸ್ತ ಸಿಕ್ಕಿತೆಂದು ರೈತರು ಆನಂದದಲ್ಲಿದ್ದರು. ಈ ವರುಷದ ಹಿಂಗಾರಿಯ ಬೆಳೆ ಬಹಳೇ ಅಪರೂಪವಾಗಿತ್ತು. ಹಿಡಿ ಕಾಳುಗಳನ್ನು ಕೊಡುವ ಬಿಳಿ ಜೋಳದ ತೆನೆಯು ಈ ವರುಷ ಬೊಗಸೆ ಕಾಳುಗಳನ್ನು ಸಹಜವಾಗಿ ಕೊಡಬಹುದೆಂದು ನಿಂಗನು ವಿಚಾರದಲ್ಲಿಯೇ ಮಂಡಿಗೆಯನ್ನು ಮಾಡುತ್ತಿದ್ದನು. ಮನಸ್ಸನ್ನು ಹಿಂಹಿರಿಯಾಗಿ ಹಿಗ್ಗಿಸುವ ಬೆಳೆಯನ್ನು ಬಿಟ್ಟು ನಿಂಗ ಮನೆಗೆ ಬರಲು ಯಾವಾಗಲೂ ಹಿಂಜರಿಯುತ್ತಿದ್ದ. ಭೂಮಿ ಬೆಳೆದರೆ ನಮ್ಮ ಕೈ ಹಿಡಿಯುವವರಾರು ಎಂದು ನಿಂಗ ಮೇಲಿಂದ ಮೇಲೆ ನುಡಿಯುವ ರೂಢಿ. ಹೊಲವೆಂದರೆ

ಆತನಿಗೆ ಪಂಚಪ್ರಾಣ. ಹೊಲದಲ್ಲಿ ಮಾಡಿದ್ದ ಎತ್ತರದ ದಿಬ್ಬಿಯ ಮೇಲೆ ಹಕ್ಕಿಗಳನ್ನು ಹೊಡೆಯಲು ನಿಂಗ ನಿಂತುಕೊಂಡು ಕವಣೆಗಲ್ಲುಗಳನ್ನು ಬಾಯಿಮಾಡುತ್ತ ಎಸೆಯುತ್ತಿದ್ದನು. ಸಂಗನು ನಿಂಗನಿಗೆ ಬೇಗನೆ ಬರಲು ಹೇಳಿ ದಣಿದ ದನಕರುಗಳನ್ನು ದಾರಿಗೆ ಬಿಡುತ್ತ ಹೊಲಬಿಟ್ಟು ಮನೆಯ ಕಡೆಗೆ ಹೊರಟನು.

ನರೇಂದ್ರದಲ್ಲಿ ಸಂಗನೆಂದರೆ ಎಲ್ಲರೂ ಆತನ ದೇಹಸಾಮಾನ ಗುಣಗಳಿಗೆ ಮೋಹಿಸಿ ಬಹಳ ಅಭಿಮಾನದಿಂದ ಕಾಣುತ್ತಿದ್ದರು. ಆತನು ಮುಪ್ಪಿನ ಮನೆಗೆ ಮುಂದರಿದು ಬಂದಿದ್ದರೂ ದೃಢವಾದ ಶರೀರವುಳ್ಳವನೂ ಶಕ್ತಿವಂತನೂ ಆಗಿದ್ದನು. ಹೋದ ವರುಷವೇ ಆತ ತನ್ನ ಸಹಧರ್ಮಿಣಿಯಾದ ಸಂಗವ್ವನನ್ನು ಕಳೆದುಕೊಂಡಿದ್ದನು. ಸದ್ಗುಣಿಯಾದ ಸೊಸೆಯಿದ್ದದ್ದರಿಂದ ಸಂಗನಿಗೆ ತನ್ನ ಹೆಂಡತಿಯ ನೆನಪೇ ಆಗುತ್ತಿದ್ದಿಲ್ಲ.

ಸಂಗ ಮನೆಗೆ ಬಂದು ದನಕರುಗಳನ್ನು ಕೊಟ್ಟಿಗೆಯಲ್ಲಿ ಕಟ್ಟಿ, ಅಡಿಗೆಯ ಮನೆಯ ಕಡೆಗೆ ನಡೆದು 'ಮಂಜೂ' ಎಂದು ಒದರಿದ. ರೊಟ್ಟಿಗೆ ಎಸರು ಹಾಕಿ ಕಲಿಸಿ ನಾದುತ್ತಿದ್ದ ಹಿಟ್ಟನ್ನು ಅಲ್ಲಿಯೇ ಬಿಟ್ಟು ಮಾವನ ದನಿಯನ್ನು ಕೇಳಿದ ಕೂಡಲೇ ಹಿಟ್ಟಿನ ಕೈಗಳಿಂದ ಹಾಗೆಯೇ ಮಂಜು ಅಡಿಗೆಯ ಮನೆಯಿಂದ ಸಂಗನನ್ನು ಮಾತನಾಡಿಸಲು ಹೊರಗೆ ಬಂದಳು. ತಾನು ಮನೆಗೆ ಬಂದ ಕ್ಷಣದಲ್ಲಿಯೇ ಯಾವನೋ ಒಬ್ಬ ಊರ ಪುಂಡನು ಬಂದು ಬುದ್ಧಿ ಹೋದವನಂತೆ ಮಾತನಾಡಿದನೆಂದೂ ರಾತ್ರಿ ಹತ್ತು ಗಂಟೆಯಾಗುವದರೊಳಗಾಗಿ ತನಗೆ ಒಂದು ನೂರು ರೂಪಾಯಿ ಕೊಡಬೇಕೆಂದೂ ಕೊಡಲು ತಪ್ಪಿದರೆ ಹೊಲದಲ್ಲಿಯ ಬಣವೆಗಳನ್ನು ಸುಡುವೆನೆಂದು ಮತ್ತತನದಿಂದ ನುಡಿದು ಹೋದನೆಂದು ಮಂಜು ಸಂಗನಿಗೆ ಹೇಳಿದಳು. ಸೊಸೆಯ ಮಾತುಗಳನ್ನು ಕೇಳಿ ಆಕಾಶವೇ ಆತನ ಮೇಲೆ ಕುಸಿದು ಬಿದ್ದಂತಾಗಿ ಉಸ್ಸೆಂದು ನೆಲಕ್ಕೆ ಕುಳಿತನು. ಮಾವನವರು ಹೀಗೆ ಧೈರ್ಯ ಕಳೆದುಕೊಂಡದ್ದನ್ನು ಕಂಡು ಗಾಬರಿಯಾಗಿ ಕಳೆಗುಂದಿದ ಮೊಗವುಳ್ಳವಳಾದಳು. ಆತನ ಮನಸ್ಸಿನಲ್ಲಿ ಹೊರಟ ಸಾವಿರಾರು ವಿಚಾರಗಳ ತಿಕ್ಕಾಟದ ವೇದನೆಯನ್ನು ಮಂಜು ಏನು ಬಲ್ಲಳು? ಒಂದು ನಿಮಿಷ

ನಿಂತುಕೊಂಡು ' ಯಾವನೋ ಒಬ್ಬ ತುಂಟನ ಮಾತಿಗೆ ಬಂಟರ ಕೊಡೂ ಹೀಗೆ ಬೆದರಿದರೆ ಅವ್ವಾಗಳ ಪಾಡೇನು ?' ಎಂದು ಸಂಗನಿಗೆ ಹೇಳಿ ಆತನ ಮ್ಲಾನ ಮುಖವನ್ನು ನೋಡುತ್ತ ನಿಂತುಕೊಂಡಳು.

' ಆತನು ತನ್ನ ಹೆಸರನ್ನು ಹೇಳಿದನೋ ' ಎಂದು ಕೇಳಿದ.

' ಈ ಊರ ಸಂಜು ಎಂದು ಹೇಳಿ ಹೋದ. ತನ್ನ ಹೆಸರು ಕೇಳಿದವರು ಈ ಗ್ರಾಮದಲ್ಲಿ ಯಾರೂ ಇಲ್ಲವೆಂದು ಆತನು ಹೆಮ್ಮೆ ಪಟ್ಟು ಹೋದ. '

' ನಮ್ಮ ಮನೆಗೆ ಆ ಇಡಿಂಬೇಕೆ ಗಂಟು ಬಿತ್ತು ? '

' ಇನ್ನೊಮ್ಮೆ ಆತ ಬಂದರೆ ರೂಪಾಯಿ ಕೊಡುವದಿಲ್ಲೆಂದು ಹೇಳಿ ಕಳಿಸಿದರಾಯಿತು. '

' ನಾವು ಕೊಡದಿದ್ದರೆ ಆತ ಬಣವೆ ಸುಡುವದು ನಿಶ್ಚಿತ. '

' ಬಣವೆ ಸುಟ್ಟರೆ ಸೊಂಟ ಮುರಿದಂತಾಯಿತು. '

' ಈ ಊರಲ್ಲಿ ಆತನ ಸೊಂಟ ಮುರಿಯುವವರು ಯಾರೂ ಇಲ್ಲ. ಆತ ತನಗೆ ಎದುರಿಸಿದವರನ್ನು ಕಡಿದು ಪ್ರಾಣ ತೆಗೆದುಕೊಂಡಿರುವನು. ಅವನು ಸಾವಿಗೆ ಹೆದರದವನು. ನಾವು ರಕ್ತಕ್ಕೆ ಬೆದರಿ ಬೀಳುವವರು. ಕೆಡುಕಿನಲ್ಲಿ ಆತ ಶಕ್ತಿವಂತ, ನಾವು ಅಶಕ್ತರು. '

' ಅಂತೇ ಅವನು ಈ ಊರಲ್ಲಿ ಯಾರೂ ಗಂಡಸರು ಇಲ್ಲವೆಂದು ಅಂದ. '

' ನೀನೇನು ಉತ್ತರಕೊಟ್ಟೆ ಮಂಜು ? '

' ನಿನಗೆ ಭೆಟ್ಟಿಯಾದವರು ಗಂಡಸರು ಇರಲಿಕ್ಕಿಲ್ಲ ಎಂದೆನು. ಇರಲಿ, ಅವನು ಯಾರು ? '

' ಅವನೊಬ್ಬ ಈ ಊರ ರೈತ. '

' ಹೀಗೇಕೆ ಮಾಡುವನು ? '

' ಐದಾರು ವರುಷದ ಹಿಂದೆ ಈ ಊರಲ್ಲಿ ಇನ್ನೊಬ್ಬ ಪುಂಡನಿದ್ದನು. ಆತನ ಉಪಟಳಕ್ಕೆ ಊರೇ ಬೇಜಾರ ಪಟ್ಟಿತ್ತು. ಆತನನ್ನು ಬಗ್ಗು ಬಡೆಯಲು ಯಾರೂ ಮುಂದೆ ಬರಲಿಲ್ಲ. ನಂಜು ಧೈರ್ಯ ಪಟ್ಟು

ಮುಂದೆ ಬಂದು ಊರ ಜನರಿಗೆಲ್ಲರಿಗೂ ಇಂದು ಆತನನ್ನು ಕೊಲ್ಲುವೆನೆಂದು ಹೇಳಿ ಆತನ ಖೂನಿ ಮಾಡಿದನು. ನಂಜನ ವಿರುದ್ಧವಾಗಿ ಯಾರೂ ಸಾಕ್ಷಿಯನ್ನು ಹೇಳಲಿಲ್ಲ. ಊರವರೆಲ್ಲರೂ ಆತನ ಬಿಡುಗಡೆಗೆ ಪ್ರಯತ್ನ ಮಾಡಿದರು ಕುರುಡು ನ್ಯಾಯ ಆತನನ್ನು ಬಿಟ್ಟಿತು. ಬಿಟ್ಟು ಬಂದ ಮೇಲೆ ಊರಲ್ಲಿಯ ಜನರನು ಹೆದರಿಸಿ ಬೆದರಿಸಿ ಪುಂಡಾಟಿಕೆಯಿಂದ ಜೀವಿಸುತ್ತಿರುವನು. ಮನ ಬಂದಂತೆ ವರ್ತಿಸುವನು. ಆತನಿಗೆ ಯಾರಾದರೂ ಅಡ್ಡಗಟ್ಟಿದರೆ ಅವರ ರುಂಡವನ್ನು ಅಲ್ಲಿಯೇ ಕತ್ತರಿಸುವನು. ಹೀಗೆ ಏಳೆಂಟು ಜನಗಳ ಕೊಲೆ ಮಾಡಿರುವನು. ಆತನ ವಿರುದ್ಧವಾಗಿ ಸಾಕ್ಷೀ ಹೇಳಲು ಎಲ್ಲರೂ ಹೆದರುವರು. ಹೇಳಿದವರ ಮೂಗು ಕೊಯ್ಯುವನು. ಇದು ಅವನ ಜೀವನದ ವೃತ್ತಿ.'

'ಇಂತಹ ಮನುಷ್ಯನನ್ನು ಕೊಲ್ಲಲು ಊರವರು ಹೆದರಿದ್ದು ಬಹು ಸೋಜಿಗದ ಸಂಗತಿ.'

'ಎಲ್ಲರೂ ಹೆದರುವವರೇ, ಯಾರು ಕೊಲ್ಲಬೇಕು ?'

'ಹೊಟ್ಟೆ ಉರಿದವರು ಉರಿಯದವರು'

'ಮಂಜೂ, ಉರಿಯದವರು ಏಕೆ ಕೊಲ್ಲಬೇಕು;

'ಹಾವು ಕಡಿಯದಿದ್ದರೂ ನೋಡಿದವರೆಲ್ಲರೂ ಅದನ್ನು ಕೊಲ್ಲುವರು. ಅದರಂತೆ ಎಲ್ಲರೂ ಕೂಡಿ ಕೊಲ್ಲಬೇಕು; ಎಂದು ಮಾತನಾಡಿ ಮಂಜು ಒಳಗೆ ಹೋದಳು.

ನೂರು ರೂಪಾಯಿಗಳನ್ನು ಎಲ್ಲಿಂದ ತಂದು ಕೊಡಬೇಕು. ಮನೆಯಲ್ಲಿ ಒಂದು ಒಡಕು ಕವಡೆಯೂ ಇಲ್ಲ. ಯಾರಲ್ಲಿಂದ ಇಸಿದುಕೊಂಡು ಬರಬೇಕು ? ಆ ದುಷ್ಟನಿಗೆ ರೂಪಾಯಿ ಕೊಡದಿದ್ದರೆ ನಿಜವಾಗಿ ಬಣಿವೆಗಳನ್ನು ಸುಡುವನ. ಏನು ಮಾಡಬೇಕು ? — ಹೀಗೆ ಸಂಗನು ವಿಚಾರ ಮಾಡುತ್ತ ಹಜಾರದಲ್ಲಿ ಕುಳಿತುಕೊಂಡಿದ್ದನು. ಮುಂದೆ ಅರ್ಧ ಗಂಟೆಯಲ್ಲಿ ನಿಂಗನು ಹೊಲದಿಂದ ಬಾಟಿಯ ಹೊರೆಯನ್ನು ಹೊತ್ತುಕೊಂಡು ಮನೆಗೆ ಬಂದನು. ದಿನಾಲು ಚಟುವಟಿಕೆಯಿಂದ ಓಡಾಡುತ್ತಿದ್ದ ಸಂಗ ವಿಚಾರವಾಹಿನಿಗೆ ಸಿಲುಕಿ ಮುಂದೇನು ಮಾಡಬೇಕೆಂಬ ಇತಿಮಿತಿಯಲ್ಲಿ

ಸಿಗಿಬಿದ್ದದ್ದು ಆತನ ಕಂದಿದ ಮೊಗದ ಮೇಲಿಂದ ಸಿಂಗ ಕಂಡು ಹಿಡಿದನು. ಗೋರಿಯನ್ನು ಕೊಟ್ಟಿಗೆಯಲ್ಲಿ ಚೆಲ್ಲಿ ಹಜಾರದತ್ತ ಬಂದನು. ಸಿಂಗ ಎದುರಿಗೆ ಬಂದು ನಿಂತರೂ ಸಂಗ ಮಾತನಾಡಿಸಲೇ ಇಲ್ಲ.

'ಏನು ವಿಚಾರ ಮಾಡುತ್ತೀ' ಎಂದು ಸಂಗನಿಗೆ ಕೇಳಿದನು.

ನಂಜ ಮನೆಗೆ ಬಂದು ಆಡಿ ಹೋದ ವೃತ್ತಾಂತವನ್ನು ಮಗನಿಗೆ ಸಂಗನು ಅರುಹಿದನು. ಸಿಂಗನೂ ಗಾಬರಿಯಾಗಿ ಬಿಟ್ಟನು. ನಂಜನಿಗೆ ಹೀಗೆ ವರ್ತಿಸಬೇಡೆಂದು ಹೇಳಲು ಸಿಂಗನಿಗೆ ಬಾಲ್ಯದಲ್ಲಿ ಕೂಡಿ ಆಡಿದ ಧೈರ್ಯ ಇಲ್ಲ. ಒಂದೆರಡು ಸಲ ತಂದೆಗೆ ಅರಿಯದಂತೆ ನಂಜನ ಕಾಟ ತಪ್ಪಿಸಿಕೊಳ್ಳುವದರ ಸಲುವಾಗಿ ಆತ ಕೇಳಿದಂತೆ ಎರಡುನೂರು ಮುನ್ನೂರು ರೂಪಾಯಿಗಳ ವರೆಗೆ ತನ್ನ ಹತ್ತಿರ ಸಾಲ ತಂದು ಕೊಟ್ಟಿದ್ದನು. ಆದರೆ ರುಚಿಹತ್ತಿ ಮತ್ತೆ ಕೇಳಲು ಬಂದಿರಬಹುದೆಂದು ಸಿಂಗನಿಗೆ ಅನಿಸಿತು. ಇನ್ನು ಆತನ ಬೆದರುಗೂಡಿಗೆ ಹೆದರದೆ ನಂಜ ಮನೆಗೆ ಬಂದರೆ ಆತನ ಕಾಲುಮುರಿಯಬೇಕೆಂಬ ವಿಚಾರ ಸಿಂಗನ ತಲೆಯಲ್ಲಿ ತಿರುಗುತ್ತಿತ್ತು. 'ನಂಜ ಬರಲಿ ನೋಡುವೆ' ಎಂದು ಸಂಗನಿಗೆ ಹೇಳಿ ಒಳಗೆ ಹೋದನು.

ಮಂಜೂ ಅಡಿಗೆಯನ್ನು ಮುಗಿಸಿದ್ದಳು. ತಂದೆಯಂತೆಯೇ ಅವಳಾದರೂ ಗಂಡನೆದುರಿಗೆ ನಂಜನು ನುಡಿದ ಮಾತುಗಳನ್ನು ಒಂದೂ ಬಿಡದೆ ವಿವರಿಸಿದಳು. ಸಿಂಗ ಕೇಳಿಕೊಂಡು ಉತ್ತರ ಕೊಡಬೇಕೆಂಬುವದನ್ನು ಬಿಗಿಹಿಡಿದು ಉಗುಳು ನುಂಗಿದನು. ಉತ್ತರ ಕೊಡಲು ಸಂಕೋಚಪಟ್ಟುಕೊಂಡನೆಂದು ಜಾಣಾಕ್ಷಿಯಾದ ಮಂಜು ಅರಿತುಕೊಂಡಳು. 'ಉತ್ತರ ಕೊಡಲು ನನ್ನ ಎದುರಿಗೆ ನಿಮ್ಮ ಸಂಕೋಚ ಬೇಡ. ಆ ಭಂಡನನ್ನು ನೀವು ದಂಡಿಸದೆ ಹೀಗೇ ಬಿಟ್ಟರೆ ಆತ ನಮ್ಮ ತಲೆಯ ಮೇಲೆ ಮೆಣಸು ಅರೆಯುವನು' ಎಂದು ಹೇಳಿ ಅಡಿಗೆಯನ್ನು ಮಾಡಿದ ಮುಸರೆಯ ಕೈಗಳನ್ನು ತೊಳೆದುಕೊಂಡಳು. ಸಿಂಗ ಹೆಂಡತಿಗೆ ಏನೂ ಉತ್ತರವೇ ಕೊಡಲಿಲ್ಲ. ಹೆಂಡತಿಯು ನುಡಿದ ನುಡಿಯು ಬಹಳೇ ಸಮಂಜಸವಾಗಿರುವದೆಂದು ಆತನಿಗೆ ಅನಿಸಿತು. ತಾನು ಪ್ರಾಣಕ್ಕಂಜಿ ನಂಜನನ್ನು ಈ ಮೊದಲೇ ದಂಡಿಸಲಿಲ್ಲವೆಂಬ ವಿಚಾರ ಆತನ ಹೃದಯದಲ್ಲಿ ಕೊರೆದು ಜೀವನವನ್ನು

ಕಡಿಮೆಯಾಯಿತು. ಹದಗೆಡುತ್ತಿರುವ ಹೆಂಡತಿಯನ್ನು ತಾನು ಕಣ್ಣಾರೆ ಕಂಡರೂ ಕಾಣದಂತೆ, ಹೋದದ್ದನ್ನು ನೆನೆಸಿಕೊಂಡು ತನ್ನ ಹೇಡಿತನಕ್ಕೆ ಹೇಸು ಪಟ್ಟನು. "ಹೇಡಿತನ ಬಾಳನ್ನು ಜೀವಿಸಬೇಕೆಂಬ ಸ್ವಾರ್ಥದಿಂದ" ಎಂದು ಸಿಂಗನು ಅಂದುಕೊಂಡನು.

ಮಂಜು ಹೊರಗೆ ಬಂದು ಮಾವನಿಗೆ ಊಟಕ್ಕೇಳಲು ಹೇಳಿದಳು. ಸಂಗನು ಉತ್ತರವನ್ನೇ ಕೊಡಲಿಲ್ಲ. ಮಾವನನ್ನು ಊಟಕ್ಕೆ ಎಬ್ಬಿಸ ಬೇಕೆಂದು ಒಳಗೆ ಹೋಗಿ ಸಿಂಗನಿಗೆ ಹೇಳಿದಳು. ಸಿಂಗನು ನಂಜ ಬರುವನೆಂಬ ಹೆದರಿಕೆಯಿಂದ ಕಂದಿದ ಮೊಗವುಳ್ಳವನಾಗಿ ಹೊರಗೆ ಬಂದು ಸಂಗನಿಗೆ ಊಟಕ್ಕೇಳಲು ಹೇಳಿದನು 'ಇಂದು ನನಗೆ ಹಸಿವೆಯಾಗಿಲ್ಲ' ಎಂದು ಸಂಗನು ಉತ್ತರ ಕೊಟ್ಟನು. ಒಳಗಿದ್ದ ಮಂಜು ಇದನ್ನು ಕೇಳಿದಳು. 'ಆ ಪುಂಡ ಕೇಳಿದ್ದಕ್ಕೆ ಇಷ್ಟು ಮನಸ್ಸಿಗೆ ಹಚ್ಚಿಕೊಂಡು ಊಟಬಿಡುವದು ಸರಿಯಲ್ಲವೆಂದು ಮಂಜು ಹೊರಗೆ ಬಂದು ನುಡಿದಳು. ಸೊಸೆಯ ಮಾತನ್ನು ಕೇಳಿ "ನಾನು ಆತನಿಗೆ ಹೆದರಿ ಊಟಬಿಟ್ಟಿಲ್ಲ. ನಿಜವಾಗಿ ನನಗೆ ಹಸಿವೆಯೇ ಆಗಿರುವದಿಲ್ಲ" ಎಂದು ಸಂಗನು ಹೇಳಿದನು.

'ಹೊಲದಲ್ಲಿಯೂ ಕೂಡ ನೀವು ರೊಟ್ಟಿಯನ್ನು ತಿನ್ನಲಿಲ್ಲ'

'ಅಪ್ಪಾ, ಊಟ ಮುಗಿಸಿಕೊಂಡು ಮುಂದೆ ವಿಚಾರಮಾಡೋಣ, ಎಂದು ಸಿಂಗನು ತಂದೆಗೆ ಹೇಳಿದನು.

'ಮುಂದಿನ ವಿಚಾರವೇ ಬೇಡ. ಬಣವಿಗಳನ್ನು ಸುಡಲಿಕ್ಕೆ ಹೋಗ ದಾಗ ಆತನ ಕಾಲುಗಳನ್ನು ಮುರಿದು ಕೈಯಲ್ಲಿ ಕೊಟ್ಟಿರಾಯಿತು' ಎಂದು ಮಂಜು ಮೆಲ್ಲಗೆ ನುಡಿದಳು.

ಆವಳ ಮಾತನ್ನು ಕೇಳಿ ಸಿಂಗನಿಗೆ ತನ್ನ ಅಭಿಮಾನಕ್ಕೆ ಧಕ್ಕೆ ತಗಲಿ ದಂತೆ ಅನಿಸಿತು. ಹೆಂಡತಿಯ ಧೈರ್ಯದ ಮಾತುಗಳನ್ನು ಕೇಳಿ ತನ್ನ ಹೇಡಿತನದ ಸಲುವಾಗಿ ಹೊಟ್ಟೆಯಲ್ಲಿ ಉರಿಬಿದ್ದರೂ ಹೊರಗೆ ಅದ ತೋರಿಸಲಾರ.

"ನಿನ್ನೆ ಹುಟ್ಟಿ ಇಂದು ಕಣ್ಣು ತೆಗೆದ ಪೋರಿ ನೀನು. ಏನು ತಿಳಿಯು ವದು ನಿನಗೆ" ಎಂದು ಸಿಂಗನು ನುಡಿದನು.

"ಕಣ್ಣು ತೆಗೆದು ಕಂಡದ್ದನ್ನೇ ನಾನು ಹೇಳಿದೆ. ಎಂದು ಮುಗುಳು ನಗೆಯಿಂದ ಮಂಜು ಮೆಲ್ಲಗೆ ಉಸುರಿದಳು.

ಸಂಗನಿಗೆ ಕೇಳಿಸಿತೋ ಇಲ್ಲವೋ; ಸಿಂಗನಿಗೆ ಮಾತ್ರ ಕೇಳಿಸಿತು.

'ಏ ಸಿಂಗಾ ನನ್ನ ಕಾಲು ಮುರಿದು ಕೈಯಲ್ಲಿ ಯಾರು ಕೊಡ ತಾರೋ?' ಎಂದು ನಂಜ ಮುಂಚಿನ ಬಾಗಿಲದ ಹೊರಗಿನಿಂದಲೇ ಒದರುತ್ತ ಅಂಗಳದಲ್ಲಿ ಬಂದು ಕೈಯಲ್ಲಿದ್ದ ಕಬ್ಬಿಣದ ಅಣಸಿನ ಬಡಿಗೆಯನ್ನು ಖಟಖಟಲ್ ಎಂದು ಸಪ್ಪಳ ಮಾಡಿ ಪಡಸಾಲೆಗೆ ಬಂದನು. ಆತನ ಬರವನ್ನು ಕಂಡು ಮಂಜು ನಡುಮನೆಯ ಬಾಗಿಲದಲ್ಲಿ ಹೋಗಿ ನಿಂತು ಕೊಂಡಳು. 'ಬಂದಿತು ನಮ್ಮ ಇದಿ' ಎಂದು ಸಂಗನು ಮನದಲ್ಲಿ ಗುಣು ಗುತ್ತ ಮೌನವ್ರತ ಧಾರಣ ಮಾಡಿದನು.

'ನಂಜ ಇಷ್ಟು ಕತ್ತಲೆಯಲ್ಲಿ ಏಕೆ ಬಂದಿ?' ಎಂದು ಸಿಂಗನು ಕೇಳಿದನು.

'ನನ್ನದು ಯಾವಾಗಲೂ ಸಿಂಗಾರ ವ್ಯಾಪಾರ' ಎಂದು ಉತ್ತರ ಕೊಡುತ್ತ ನಂಜನು ಪಡಸಾಲೆಯಲ್ಲಿಯ ಕಂಬಕ್ಕೆ ಆತುಕೊಂಡು ಎದುರಿಗೆ ತನ್ನ ಅಣಸಿನ ಬಡಿಗೆಯನ್ನಿಟ್ಟುಕೊಂಡು ಎಡಗೈಯಿಂದೊಮ್ಮೆ ಬಲಗೈಯಿಂದೊಮ್ಮೆ ಮೀಸೆಯ ತುದಿಯನ್ನು ತಿರುವುತ್ತ ರೋಪಿನಿಂದ ಕುಳಿತು ಕೊಂಡನು.

'ಇಷ್ಟು ರಾತ್ರಿಯಲ್ಲಿ ಬರಲು ಏನು ಕೆಲಸ?'

'ನಿಮ್ಮ ಮನೆಯಲ್ಲಿ ಯಾವದೋ ಒಂದು ಪೋರಿ ಇತ್ತು. ಅದರ ಮುಂದೆ ನಾ ಹೇಳಿ ಹೋಗಿದ್ದೆ. ನಾ ಹೇಳಿದ್ದು ನಿನಗೆ ಹೇಳಲಿಲ್ಲವೇ? ಬಹಳೇ ಬೆರಕಿ ಪೋರಿ ಕಾಣಿಸತದ' ಎಂದು ನಂಜನು ಬಾಯಿಯಲ್ಲಿ ಎಲೆ ಅಡಿಕೆಯನ್ನು ಮೆಲ್ಲುತ್ತ ನುಡಿದನು.

'ಆ ಪೋರಿ, ನಂಜ, ನನ್ನ ಹೆಂಡತಿ;

'ಅಬ್ಬ ಬೆರಕೀ ಹುಡುಗೀನ ಮಾಡಿಕೊಂಡೀದಿ; ಮಾತಿನಲ್ಲಿ ಮಾತ್ರ ಜನರನ್ನು ಗೀರಕೀ ಹೊಡಿಸತಿರಬೇಕು.'

'ಹಾಗೇನು ಇಲ್ಲ.'

'ಒಗ್ಗಿಕ್ಕ ನನ್ನನ್ನು ಕರಿಯಲೇ ಇಲ್ಲ.'

'ನೀ ದೊಡ್ಡ ಮನಶ್ಯಾ, ಬರತೀಯೋ ಇಲ್ಲೋ ಅಂತ ಕರಿಯಲಿಲ್ಲ.'

'ಹ್ಯಾಂಗ ಆದ ನೋಡು ಜಗತ್ತು. ಮುಂದಿನ್ನ ನಾ ಬೆದರಿಸಲಿಕ್ಕೆ ಹತ್ತಿದ ಕೂಡಲೇ ಎಲ್ಲರೂ ನನಗೆ ದೊಡ್ಡ ಮನಶ್ಯಾ ಅಂತಾರ. ಮೊದಲು ನನಗ ಜೊನ್ನ ಅಂತ ಅಂತಿದ್ದರು. ನಿನಗ ಗೊತ್ತಿಲ್ಲೇನು ನಾವಿಬ್ಬರೂ ಕೂಡಿ ಕಲಿತ ಮೇಲೆ.'

'ಎಲ್ಲಾ ಗೊತ್ತದ, ಈಗ ಯಾಕ ಬಂದಿದ್ದಿ?'

'ನನಗ ಇನ್ನೊಂದ. ನೂರು ರೂಪಾಯಿ ಬೇಕು.'

'ಈಗ ಎಲ್ಲಿಂದ ತರಬೇಕು ನಾನು?'

'ಮಂದೀ ಕಡಿಯಿಂದ ಸಾಲಾ ಇಸಕೊಂಡ ಬಾ.'

'ನೀನೇ ಅಷ್ಟು ಮಾಡಿದರ ನೆಟ್ಟಗೆ ಅಲ್ಲ.'

'ತಂದು ಕೊಡತೀಯೋ ಬಡಗೀ ಏಟು ಬೇಕೋ.'

'ಹೊಡೆದರ ರೊಕ್ಕ ಸಿಗತಾವ ಏನು' ಎಂದು ಮಂಜು ಮೆಲ್ಲಗೆ ನುಡಿದಳು.

'ಇದೇ ಪೋರೀ ನೋಡು ನನಗೆ ಮೊದಲು ಉತ್ತರ ಕೊಟ್ಟಿದ್ದು; ಏ ಪೋರೀ ಮುಂದಕ್ಕ ಬಾರ ಬೆಳಕಿಗೆ ನಿನ್ನ ಮೋರೀ ಒಂದಿಷ್ಟು ನೋಡತೀನಿ ಧ್ಯಾಮವ್ವ ಇದ್ದೀಯೋ ದುರಗವ್ವ ಇದ್ದಿಯೋ ಭರಮವ್ವ ಇದ್ದಿಯೋ ಏನು ಇದ್ದೀದಿ ನೋಡತೀನಿ' ಎಂದು ನಂಜ ಬಾಯಿಯಲ್ಲಿಯ ಎಲೆ ಅಡಿಕೆಯನ್ನು ಅಂಗಳದಲ್ಲಿ ಕೂತಲ್ಲಿಂದಲೇ ಉಗುಳುತ್ತ ಮಾತನಾಡಿದ.

'ನನ್ನ ಹತ್ತರ ಈಗ ಹಣಾ ಇಲ್ಲ. ಸುಗ್ಗಿ ಮುಗಿದ ಮೇಲೆ ನಿನಗೆ ಕೊಡತೀನಿ' ಎಂದು ನಿಂಗನು ಹೇಳಿದನು.

'ಮುಂದಿನ ಭರವಸೆಯ ಮೇಲೆ ನೀವು ಇದ್ದರ ನಾನು ಇವತ್ತೇನು ಆಗತದ ಅದರ ಮೇಲೆ ಇರುವವ. ಇವತ್ತ ಇದ್ದ ಮನುಷ್ಯ ನಾಳೆ ಹ್ಯಾಂಗ ಇರತಾನ ಅಂಬುವದು ಗೊತ್ತು ಇಲ್ಲ. ಅಂದ ಬಳಿಕ ಮುಂದಿನದು ತೆಗೆದುಕೊಂಡು ನಾನೇನು ಮಾಡಲಿ. ತಂದು ಕೊಟ್ಟರ ನೆಟ್ಟಗಾಯ್ತು. ಇಲ್ಲದಿದ್ದರ ನೋಡು' ಎಂದು ನಂಜ ನುಡಿದನು.

ಎಲ್ಲವನ್ನೂ ಕೇಳುತ್ತ ಕುಳಿತ ಸಂಗನು ಏನೋ ಮಾತನಾಡಬೇಕೆಂದು ಹವಣಿಸಿದನು. ನಂಜನನ್ನು ಹೆಚ್ಚಾಗಿ ನೋಡಿದಂತೆ ಅವನಲ್ಲಿ ಜಿಗುಪ್ಸೆ ಹಾಗೂ ಪ್ರಕೋಪಗಳು ಬಲು ಜೋರಿನಿಂದ ಉಂಟಾಗ ಹತ್ತಿದವು.

ತಮ್ಮಂತೆಯೇ ಜನರನ್ನು ನಂಜ ಎಷ್ಟು ಪೀಡಿಸುವನೆಂದು ಸಂಗ ಮನದಲ್ಲಿ ಕಸಿವಿಸಿ ಪಟ್ಟ. ಮಾತನಾಡಿದರೆ ಮತ್ತೇನು ಮಾಡುವನೋ ಎಂಬ ಹೆದರಿಕೆ; ಬೆದರಿಕೆ. ಮಂಜು ನಡುವೆ ತಾನು ಮಾತನಾಡಬೇಕೆಂದು ಬಂದ ಪ್ರಬಲವಾದ ಇಚ್ಛೆಯನ್ನು, ಇದು ತಕ್ಕ ಸಮಯವಲ್ಲೆಂದು ಅದುಮಿ ಬಿಗಿಹಿಡಿದಳು.

'ನಂಜಾ ನಿನಗ ನಾವು ಯಾಕ ರುಪಾಯಿ ಕೊಡಬೇಕು?' ಎಂದ ಸಂಗನು ಕೇಳಿದನು.

'ಅದನ್ನೆಲ್ಲಾ ನೀವು ಕೇಳಬೇಡಿರಿ, ನಾ ಹೇಳುವದಿಲ್ಲ. ನಿಮ್ಮ ಮನೀಯೊಳಗ ನಾ ಕೂತು ಇಷ್ಟು ಮಾತನಾಡೇನಿ ಅಂತ ನಿಮಗ ಸವಲತ್ತು ಸಿಕ್ಕಿತೇನು? ನನ್ನ ಕೆಲಸ ಯಾವಾಗಲೂ ಒಂದೇ ಏಟು ಎರಡು ತುಂಡು. ಯೇ ನಿನಗ ಹೆಂಗಸಿನಂತೆ ಯಾಕೆ ಜಿಲ್ಲಾ ಬಗೆದ [illegible] ಕೂತೀದಿ. ಮಾತನಾಡು. ಏನು ಹೇಳತೀದಿ ಹೇಳು' ಎಂದು ನಂಜ ಬಹಳ ತುಂಬ ನಕ್ಕು ಮಾತನಾಡಿದನು.

'ನಾವು ರೂಪಾಯಿ ಕೊಡುವದಿಲ್ಲ ಮನೀ ಬಿಟ್ಟು ಹೋಗು', ಎಂದು ಸಂಗನು ಬಿಗಿಹಿಡಿದ ಸಿಟ್ಟನ್ನು ಕೈಬಿಟ್ಟು, ಮಾತನಾಡಿದನು.

'ಅಬ್ಬ ಮುದೋತ್ತು, ಇನ್ನೊಮ್ಮೆ ಮಾತನಾಡು; ನಿನ್ನ ಟೊಂಕ ಮುರೀತೀನಿ' ಎಂದು ನಂಜ ತನ್ನೆದುರಿಗಿದ್ದ ಬಡಿಗೆಯನ್ನು ತೋರಿಸುತ್ತ ಮಾತನಾಡಿದನು.

ನಡುಮನೆಯ ಬಾಗಿಲಲ್ಲಿ ನಿಂತು ಮಂಜು ಈ ನಂಜನ ದುಷ್ಟ ಹಾಗೂ ಅಬ್ಬರದ ಮಾತನ್ನು ಕೇಳಿ ತಾನು ಮಾತನಾಡುವದು ಅಸಮಂಜಸವೆಂದು ಅನಿಸಿದರೂ ಸಿಟ್ಟು ತಡೆಯದೆ 'ಮಂದೀ ಮನಿಯೊಳಗ ಬಂ ಏನು ಧಾಂದಲೆ ಹಾಕತೀದಿ, ಹೋಗ ಹೊರಗ; ಮುಂದೀ ಟೊ ಮುರಿಯಲಿಕ್ಕೆ ಹೋದರ ನಿನ್ನ ಟೊಂಕ ಹಳೇ ನಾಯೀ ಗತಿ ಆ ಎಂದು ಮಾತನಾಡಿದಳು.

'ನನ್ನ ರಟ್ಟೆಯಲ್ಲಿ ಶಕ್ತಿ ಇರೂತನಕ ಈ ಊರಲ್ಲಿ ನನ್ನ ಟೊಂಕ ಮುರಿಯುವ ಗಂಡಸರು ಯಾರೂ ಇಲ್ಲ.'

'ಎಲ್ಲರ ರಟ್ಟೆಯಲ್ಲಿಯೂ ಶಕ್ತಿ ಇರುವದು. ಆದರೆ ಧೈರ್ಯವಿಲ್ಲ. ಹ್ಯಾಗೂ ಎಲ್ಲರೂ ನಿನ್ನ ಹಾಗೆ ನಾಚಿಕೆ ಬಿಟ್ಟಿಲ್ಲ. ಏಳು ಮನೀ ಬಿಟ್ಟು ಹೊರಗೆ ಹೋಗು, ಕಾಮಣ್ಣ ಕೂತ್ಹಾಂಗ ಕೂತು ಬೆದರಸತಾನ. ಹೋಗು. ಎಲ್ಲಿಯಾದರೂ ದುಡಿ ಮೈಮುರೀ, ರೊಕ್ಕ ಸಿಗತಾವ. ಕೂತಲ್ಲಿಯೇ ಜನರನ್ನು ಬೆದರಿಸಿ ಅವರ ಕಷ್ಟದ ಹಣವನ್ನು ಕಸಕೊಂಡು ಬೈನೀ ಹೊಡಿಯಬೇಕಂತೀಯಾ? ಚಲೋ ಉದ್ಯೋಗ ನಡಿಸೀದಿ. ಈ ನಿನ್ನ ಕಾಯಕ ಬಿಟ್ಟು ಬಿಡು.' ಎಂದು ಮಂಜು ನಿಂತಲ್ಲಿಯೇ ಮಾತನಾಡಿದಳು.

'ಕಾಯಕ! ಕಾಯಕವೇ ಕೈಲಾಸ. ಈ ಕಾಯಕದಿಂದಲೇ ಊರು ಬೆದರುವದು. ಜನರು ಅಂಜಿ ಗುದ್ದು ಸೇರುವರು. ಜಗತ್ತೇ ಶಕ್ತಿಯಲ್ಲಿ ಇರುವದೆಂದು ನನಗೆ ಅನಿಸುವದು. ಬಲವಂತ, ಸತ್ಯವಂತ; ಆದರೆ ಸತ್ಯವಂತ ಬಲವಂತನಾಗುವದಿಲ್ಲ. ನನ್ನ ರಟ್ಟೆಯ ಬಲದಲ್ಲಿಯೇ ನ್ಯಾಯ ಇರುವದು.'

'ಮುಂಜಾನೆ ಬಾ ನಂಜ ನೋಡೂನಂತ. ನನ್ನ ಹತ್ತರ ಈಗ ಹಣಾ ಇಲ್ಲ' ಎಂದು ನಿಂಗನು ಹೇಳಿ ಮೇಲಕ್ಕೆದ್ದನು.

ನಂಜನ ಸಂಗಡ ಇನ್ನು ಮೇಲೆ ಹೆಚ್ಚಾಗಿ ಮಾತನಾಡುವದು ಪ್ರಯೋಜನವಿಲ್ಲೆಂದು ಅರಿತುಕೊಂಡು ನಿಂಗನು ಪಡಸಾಲೆಯಿಂದ ಒಳಗೆ ಹೋಗಬೇಕೆಂದು ಮಾಡಿ ನಾಲ್ಕು ಹೆಜ್ಜೆ ಮುಂದಿಟ್ಟನೋ ಇಲ್ಲೋ ಸಮೀಪದಲ್ಲಿಯೇ ಕುಳಿತ ನಂಜನು ತನ್ನೆದುರಿಗಿದ್ದ ಅಣಸಿನ ಬಡಿಗೆಯಿಂದ ನಿಂಗನ ಮೊಣಕಾಲ ಪರಟಿಗೆ ಜೋರಿನಿಂದ ಬೀಸಿ ಹೊಡೆದನು. 'ಯಪ್ಪಾ ಸತ್ತೆ' ಎಂದು ನಿಂಗ ಕೂಗಿ ನೆಲಕ್ಕೆ ಬಿದ್ದನು. ತಾನು ನಿಂತ ಬಾಗಿಲದ ಹತ್ತರಲ್ಲಿಯೇ ಇದ್ದ ಒನಕೆಯನ್ನು ಮಂಜು ತೆಗೆದುಕೊಂಡು ಮಿಂಚಿನಂತೆ ಬಂದು ನಂಜನ ತಲೆಯನ್ನು ಸಾವಿರ ಹೋಳು ಆಗುವಂತೆ ಪೆಟ್ಟುಗಳನ್ನು [illegible] ಯಲ್ಲಿ ಕುಳಿತಿದ್ದ ನಂಜ 'ಸತ್ತೆ' ಎಂದು ಪಡಸಾಲೆಯಿಂದ ಅಂಗಳಕ್ಕೆ ಉರುಳಿ ಬಿದ್ದ. ಮಂಜುನ ಉಟ್ಟ ಸೀರೆಯಲ್ಲವೂ

ರಕ್ತಮಯವಾಯಿತು. ಅಂಗಳಕ್ಕೆ ಜಿಗಿದು ಮತ್ತೆರಡು ಒನಕೆಯ ಪೆಟ್ಟುಗಳನ್ನು ಹಾಕಿದಳು. ಪಡಸಾಲೆಯಲ್ಲಿ ಅಂಗಳದಲ್ಲಿ ನಂಜನ ರಕ್ತ ಸಿಡಿದು ನಂಚೇರಿತು.

' ಇದೇನು ಮಾಡಿದಿ ಮಂಜೂ ' ಎಂದು ಸಂಗ ಚೀರಿದ.

× × × ×

ನಂಜನ ಕೊಲೆಯಾಗಿ ಆರು ತಿಂಗಳಾದವು. ಸಂಗ ಹಾಸಿಗೆಯನ್ನು ಹಿಡಿದವನು ಏಳಲೇ ಇಲ್ಲ. ಏನೋ ಜೀವನದ ಸುಖ ಹಚ್ಚಿಕೊಂಡಿದ್ದ. ಸಿಂಗನ ಎಡಗಾಲು ಹರಟೆಯ ಸಂದು ತಪ್ಪಿದ್ದರಿಂದ ಅದು ಇನ್ನೂ ವಾಸಿಯಾಗಿದ್ದಿಲ್ಲ. ಕುಂಟುತ್ತಲೇ ಆದಷ್ಟು ಕೆಲಸವನ್ನು ಮಾಡುತ್ತಿದ್ದ. ಮನೆಯಲ್ಲಿ ಹೊತ್ತಿಗೆ ರೊಟ್ಟಿಯನ್ನು ಮಾಡುವವರು ಯಾರೂ ಇಲ್ಲ. ಸಿಂಗನ ಸಂಸಾರ ಹದಗೆಟ್ಟಿತು.

ಮಂಜು ಒಂದು ಗಂಡು ಕೂಸು ಹೆತ್ತಿರುವಳೆಂದೂ ಅದನ್ನು ಬಂದು ತೆಗೆದುಕೊಂಡು ಹೋಗಬೇಕೆಂದೂ ಹಿಂಡಲಗಿಯ ಜೇಲರನು ಸಿಂಗನಿಗೆ ಹಾಕಿದ ಪತ್ರವು ಇಂದು ಸಾಯಂಕಾಲ ಐದು ಗಂಟೆಗೆ ಸಿಂಗನ ಕೈಯಲ್ಲಿ ಸಿಕ್ಕಿತು. ಅದನ್ನು ಓದಿಕೊಂಡು ತಂದೆಯ ಎದುರಿಗೆ ಹೇಳಲು ಹೋದ. ತಂದೆ ಕಣ್ಣು ಬೆಳ್ಳಗೆ ಮಾಡಿದ್ದ.

ನಡುಮನೆಯಲ್ಲಿ ತೊಟ್ಟಿಲದಲ್ಲಿ ಕೂಸು ಅತ್ತಂತೆ ಸಿಂಗನಿಗೆ ಭಾಸವಾಯಿತು. ಎಲ್ಲ ಕಡೆಗೂ ಆತನಿಗೆ ಕೂಸಿನ ಅಳುವು ಕೇಳಿಸುತ್ತಿತು. ಎದುರಿಗೆ ಸಂಗನ ಗುಡ್ಡೆ ನಿಂತ ಕಣ್ಣುಗಳು ಕಾಣುತ್ತಿದವು.

' ಮಂಜೂ ' ಎಂದು ಕೂಗಿ ನೆಲಕ್ಕೆ ಬಿದ್ದ.